



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 71

| ಸಂಪುಟ: ೦೮ ಸಂಚಿಕೆ: ೪ | ಆಗಸ್ಟ್ ೨೦೨೧ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 08 Issue: 4 | August 2021 | Pages - 8 | A. Sub. - Rs. 20/- | Editor : Sri. B.R. Ravindranath |




೨೪–೬–೨೦೨೧

## ಶ್ರೀಮತಿ ಜಯಲಕ್ಷಮ್ಮ–ಬಾಪೂ ರಾಮಣ್ಣ ದತ್ತಿ ಗಮಕ ಕಾರ್ಯಕ್ರಮ

(ಜಾಲತಾಣ ಕಾರ್ಯಕ್ರಮ)

**ವಿಷಯ : ಹರಿಶ್ಚಂದ್ರ ಕಾವ್ಯದ ಭಾಗ**

**ಗಮಕ ವಾಚನ : ಶ್ರೀಮತಿ ಮಂಜುಳಾ ಮರಾಠೆ**

**ವ್ಯಾಖ್ಯಾನ : ಶ್ರೀಮತಿ ಶಾಂತಾ ನಾಗಮಂಗಲ**




ಈ ಗಮಕ ಕಾರ್ಯಕ್ರಮವನ್ನು ಖ್ಯಾತ ಗಮಕಿಗಳಾದ ಶ್ರೀಮತಿ ಮಂಜುಳಾ ಮರಾಠೆ(ವಾಚನ) ಮತ್ತು ಶ್ರೀಮತಿ ಶಾಂತಾ ನಾಗಮಂಗಲ (ವ್ಯಾಖ್ಯಾನ)ರವರು ಹರಿಶ್ಚಂದ್ರ ಕಾವ್ಯದ ಕೌಶಿಕ–ವಶಿಷ್ಠ ಸಂವಾದ ಭಾಗವನ್ನು ತುಂಬಾ ಅಚ್ಚುಕಟ್ಟಾಗಿ ನಡೆಸಿಕೊಟ್ಟರು. ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಆರ್. ಲಕ್ಷ್ಮೀನಾರಾಯಣರವರು ಎಲ್ಲರನ್ನೂ ಸ್ವಾಗತಿಸಿ, ಈ ದತ್ತಿಗೆ ಕಾರಣರಾದ ಶ್ರೀ ಬಾಪು ರಾಮಣ್ಣ ಮತ್ತು ಜಯಲಕ್ಷಮ್ಮನವರನ್ನು ಕುರಿತು ಹೇಳುತ್ತ– ಇಬ್ಬರೂ ಸಂಗೀತ ಮತ್ತು ಸಾಹಿತ್ಯ ಪ್ರಿಯರು, ಬಾಪೂ ರಾಮಣ್ಣನವರು ಬಿ. ಎಂ. ಶ್ರೀಯವರ ಪಟ್ಟಶಿಷ್ಯರಾಗಿದ್ದು ಶ್ರೀಯವರ ಇಂಗ್ಲಿಷ್ ಗೀತೆಗಳಿಗೆ ರಾಗಸಂಯೋಜನೆ ಮಾಡಿ ಹಾಡುತ್ತಿದ್ದರು ಹಾಗೂ ಶ್ರೀಯವರ ಅಶ್ವತ್ಥಾಮನ್ ನಾಟಕದಲ್ಲಿ ಮೇಳನಾಯಕನಾಗಿ ಪಾತ್ರ ವಹಿಸಿ ಅದರ ಹಾಡುಗಳಿಗೆಲ್ಲಾ ರಾಗಸಂಯೋಜನೆ ಮಡುತ್ತಿದ್ದರು. ಅವರ ಮಕ್ಕಳಾದ ಎಚ್. ಆರ್ ಬಾಪೂ ಸತ್ಯನಾರಾಯಣ ಮತ್ತು ಪ್ರಸಿದ್ಧ ಸುಗಮ ಸಂಗೀತಗಾರ್ತಿ ಎಚ್. ಆರ್. ಲೀಲಾವತಿ ಮತ್ತು ಬಾಪೂ ಸೋಮಶೇಖರ ಇವರುಗಳು ತಮ್ಮ ತಂದೆ ತಾಯಿಗಳ ಹೆಸರಿನಲ್ಲಿ ಸಂಗೀತಕ್ಕೊಂದು ಸಾಹಿತ್ಯಕ್ಕೊಂದು ಎಂದು ಎರಡು ಲಕ್ಷರೂಗಳ ದತ್ತಿಯನ್ನು ಇರಿಸಿ ಎರಡು ದತ್ತಿಗಳನ್ನು ಸ್ಥಾಪಿಸಿದ್ದಾರೆ ಎಂದು ತಿಳಿಸಿದರು. ಡಾ. ಬಿ.ಸಿ.ರಾಜಕುಮಾರ್ ಅವರು ಕಾರ್ಯಕ್ರಮವನ್ನು ಸಂಯೋಜಿಸಿದರು. ಗಮಕಿಗಳ ಗುರುಗಳಾದ ಪ್ರಸಿದ್ಧ ಗಮಕ ಸಾಹಿತಿಗಳಾದ ಶ್ರೀಮತಿ ಗಂಗಮ್ಮ ಕೇಶವಮೂರ್ತಿಅವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಹಂಪೆಯ ಹರಿಹರನ ಸೋದರಳಿಯನಾದ ರಾಘವಂಕನು ದೇವೀ ಭಾಗವತದಲ್ಲಿ ಬರುವ ವಸಿಷ್ಠ–ವಿಶ್ವಾಮಿತ್ರ ಸಂವಾದ ಪ್ರಸಂಗವನ್ನು ತೆಗೆದುಕೊಂಡು ಭಕ್ತಿ ಪ್ರಧಾನ ಕಾಲ ಘಟ್ಟವಾದ ೧೩ನೇ ಶತಮಾನದಲ್ಲಿ ದೇವಕೇಂದ್ರಿತ ವಸ್ತುವಿನ ಬದಲು ಮನುಷ್ಯ ಕೇಂದ್ರಿತ ಕಥಾವಸ್ತುವಿನ ಸುತ್ತ ವಾರ್ಧಕ ಷಟ್ಪದಿಯಲ್ಲಿ ಅದ್ಭುತವಾಗಿ ಈ ಶ್ರೇಷ್ಠ ಕಾವ್ಯವನ್ನು ರಚನೆ ಮಾಡಿ ಅಮರನಾಗಿದ್ದಾನೆ ಎಂದು ಪೀಠಿಕೆ ಹಾಕಿ ಗಮಕ ವಾಚನ–ವ್ಯಾಖ್ಯಾನವನ್ನು ಮುಂದುವರಿಸಿದರು. ತುಂಬಿದ ಇಂದ್ರ ಸಭೆಯಲ್ಲಿ ವಿಶ್ವಾಮಿತ್ರ ವಸಿಷ್ಠರು ಸೂರ್ಯಚಂದ್ರರಂತೆ ಉಪಸ್ಥಿತರಿದ್ದರು. ಅತ್ಯಂತ ಸತ್ಯವಂತ ಮಾನವನಾರು ಎಂಬ ಇಂದ್ರನ ಪ್ರಶ್ನೆಗೆ ವಸಿಷ್ಠರು ಇಶ್ವಾಕು ವಂಶದ ಹರಿಶ್ಚಂದ್ರನಲ್ಲದೆ ಇನ್ನಾರು ಎಂದು ಉತ್ತರಿಸಿದನು. ಇದನ್ನು ವಿಶ್ವಾಮಿತ್ರನು ಒಪ್ಪದಿರಲು ಇವರಿಬ್ಬರ ಮಧ್ಯೆ ವಾದ ವಿವಾದ ರ್ವೇಪಟ್ಟು ಹರಿಶ್ಚಂದ್ರನ ಸತ್ಯಬದ್ಧತೆಯನ್ನು ಪರೀಕ್ಷಿಸುವ ಪಂಥವೇರ್ಪಡುತ್ತದೆ. ಹರಿಶ್ಚಂದ್ರನ ಬಾಯಲ್ಲಿ ಸುಳ್ಳು ಬರುವಂತೆ ಮಾಡುತ್ತೇನೆಂದು ಪಣ–ತೊಟ್ಟು ವಿಶ್ವಾಮಿತ್ರನು ತಾನು ಸೋತರೆ ತನ್ನ ತಪಃ ಶಕ್ತಿಯನ್ನೆಲ್ಲವನ್ನೂ ಹರಿಶ್ಚಂದ್ರನಿಗೆ ಧಾರೆಯೆರೆದು ಕೊಡುತ್ತೇನೆಂದು ಘೋಷಿಸುತ್ತಾನೆ. ವಿಶ್ವಾಮಿತ್ರ ಗೆದ್ದರೆ ತಾನು ಲೋಕದಿಂದ ದೂರವಾಗುತ್ತೇನೆಂದು ವಸಿಷ್ಠರು ವಾಗ್ದಾನ ಮಾಡುತ್ತಾರೆ.

ಈ ಕಥಾ ಹಂದರದ ಮಧ್ಯೆ ಕಾಣಬರುವ ಎಳೆಗಳು ಬಹಳ ಸುಂದರವಾಗಿ ಕಾವ್ಯ ಸೌಂದರ್ಯಕ್ಕೊಂದು ಸೋದಾಹರಣೆಯೆಂಬಂತೆ ಸಂಭಾಷಣೆಯುಕ್ತವಾದ ಒಂದು ಶ್ರವ್ಯಕಾವ್ಯ ದೃಶ್ಯಕಾವ್ಯವಾಗಿ ಕನ್ನಡ ಸಾಹಿತ್ಯದ ಮೊದಲ ವಾರ್ಧಕ ಷಟ್ಪದಿಯ ಮೇರುಕೃತಿಯಾಗಿ ಮೂಡಿಬಂದಿದೆ. ಪದಲಾಲಿತ್ಯದ ಸೊಗಸನ್ನು ಸೂಸುವ ಅನೇಕ ಅಮೂಲ್ಯ ಸಾಲುಗಳನ್ನು ಎತ್ತಿತೋರಿಸಿದರು. ಪರಿಸಂಖ್ಯಾ ಅಲಂಕಾರದ ಉದಾಹರಣೆಗಳನ್ನು ತಮ್ಮ ವಾಚನ–ವ್ಯಾಖ್ಯಾನಗಳ ಮೂಲಕ ಒತ್ತಿ ತೋರಿಸಿದರು. 75ನಿಮಿಷಗಳ ಕಾಲ ಹರಿದು ಬಂದ ಈ ಸಾಹಿತ್ಯ ಸುಧೆಯನ್ನು ಸಾಹಿತ್ಯಪ್ರಿಯ ಸಭಿಕರು ಮಧ್ಯೆ ಮಧ್ಯೆ ಚಪ್ಪಾಳೆ ತಟ್ಟುತ್ತ ಸವಿದರು. ಕೊನೆಯಲ್ಲಿ ಡಾ. ಹೆಚ್.ಎಸ್.ಎಂ. ಪ್ರಕಾಶ್‌ರವರು ವಂದನೆಗಳನ್ನು ಸಲ್ಲಿಸುತ್ತ ಇವರ ಅದ್ಭುತ ಜೋಡಿ ಇನ್ನೂ ನೂರಾರು ಕಾರ್ಯಕ್ರಮಗಳನ್ನು ನೀಡಿ ಹೆಚ್ಚು ಜನರನ್ನು ತಲುಪಲಿ ಎಂದು ಆಶಿಸಿದರು.

## ಸಂಪಾದಕೀಯ

ಭಾರತದಲ್ಲಿ ಬ್ಯಾಂಕ್ ಗಳ ಹುದ್ದೆಗಳಿಗಾಗಿ ನಡೆಸುವ ನೇಮಕಾತಿ ಪರೀಕ್ಷೆಗಳಲ್ಲಿ ಮಾಧ್ಯಮ ಭಾಷೆಯಾಗಿ ಕನ್ನಡವನ್ನು ಪ್ರಯಾಸಪಟ್ಟು ಸೇರಿಸಲಾಗಿದೆ. ಈಗ ಎಂಜಿನಿಯರಿಂಗ ಪದವಿಗಳನ್ನೂ ಒಳಗೊಂಡಂತೆ ಎಲ್ಲಾ ಪದವಿ ತರಗತಿಗಳನ್ನು ಕನ್ನಡ ಮಾಧ್ಯಮದಲ್ಲಿ ನಡೆಸುವುದರ ಬಗ್ಗೆ ಈಗಾಗಲೇ ಘೋಷಣೆಯಾಗಿದೆ. ಪ್ರತಿ ವರ್ಷ ಕನ್ನಡ ಭಾಷೆಯಲ್ಲಿ ಸುಮಾರು ೭೦೦೦ ಪುಸ್ತಕಗಳು ಪ್ರಕಟಗೊಳ್ಳುತ್ತಿವೆ ಎಂಬ ಒಂದು ಅಂದಾಜಿದೆ. ಆದರೆ ಈ ರೀತಿಯ ಪರೀಕ್ಷೆಗಳಿಗೆ ಉಪಯೋಗವಾಗಬಹುದಾದ, ಪೂರಕ ಮಾಹಿತಿಗಳನ್ನು ಒದಗಿಸಬಹುದಾದ, ಆಕರ ಗ್ರಂಥಗಳು ಹೆಚ್ಚು ಪ್ರಕಟಗೊಳ್ಳುತ್ತಿಲ್ಲ. ಇದ-ರಿಂದ ಕನ್ನಡ ಮಾಧ್ಯಮವನ್ನು ಆಯ್ಕೆ ಮಾಡಿಕೊಳ್ಳುವವರೂ ಸಹ ಆಂಗ್ಲ ಭಾಷೆಯಲ್ಲಿರುವ ಪುಸ್ತಕಗಳನ್ನು ಅಥವಾ ಮಾಹಿತಿ ಜಾಲತಾಣಗಳನ್ನು ಆಶ್ರಯಿಸಬೇಕಾಗುತ್ತದೆ. ಆಗ ಕನ್ನಡ ಮಾಧ್ಯಮದಲ್ಲಿ ಪರೀಕ್ಷೆಯನ್ನು ನಡೆಸುವ ಮೂಲ ಉದ್ದೇಶ ಸಫಲಗೊಳ್ಳುವುದಿಲ್ಲ.

ಭಾರತದಲ್ಲಿ ಬಹುಕಾಲದಿಂದ ನಡೆಸಲಾಗುತ್ತಿರುವ ಪ್ರತಿಷ್ಠಿತ ನಾಗರೀಕ ಸೇವಾ ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮವನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶವಿದ್ದರೂ ಅಂಕಿ ಅಂಶಗಳನ್ನು ಪರಿಶೀಲಿಸಿದಾಗ ನಮಗೆ ನಿರಾಶಾದಾಯಕ ಚಿತ್ರ ಕಂಡು ಬರುತ್ತದೆ. ಯುಪಿಎಸ್ ಸಿ ಅಧಿಕೃತವಾಗಿ ಪ್ರಕಟಿಸಿರುವ ಅಂಕಿ ಅಂಶಗಳ ಪ್ರಕಾರ ಮರಾಠಿ, ತಮಿಳು, ತೆಲುಗು, ಗುಜರಾತಿ ಮತ್ತು ಹಿಂದಿ ಭಾಷೆಗಳಿಗೆ ಹೋಲಿಸಿದಾಗ ಕಳೆದ ೧೫ ವರ್ಷಗಳಲ್ಲಿ ಕನ್ನಡವನ್ನು ಕೆಲವೇ ಅಭ್ಯರ್ಥಿಗಳು  ಮಾಧ್ಯಮ ಭಾಷೆಯಾಗಿ ಆಯ್ಕೆ ಮಾಡುತ್ತಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ. ನಾಗರೀಕ ಸೇವಾ ಪರೀಕ್ಷೆಗಳಲ್ಲಿ ಕನ್ನಡವನ್ನು ಮಾಧ್ಯಮ ಭಾಷೆಯಾಗಿ  ಆಯ್ಕೆ ಮಾಡುವ ಅಭ್ಯರ್ಥಿಗಳ ಸಂಖ್ಯೆ ಕಡಿಮೆ ಇರುವುದರ ಕಾರಣದಿಂದ ಅಧ್ಯಯನದ ಪರಿಕರಗಳ ಕೊರತೆಗಳಿರುವುದು ಸಹಜ. ಕನ್ನಡ ಮಾಧ್ಯಮದಲ್ಲಿ ಪರೀಕ್ಷೆಗಳನ್ನು ತೆಗೆದುಕೊಳ್ಳಲು ಅಭ್ಯರ್ಥಿಗಳಿಗೆ ಪ್ರೋತ್ಸಾಹಿಸಲು ಕನ್ನಡದಲ್ಲಿ ಅಧ್ಯಯನ ಪರಿಕರಗಳನ್ನು ಒದಗಿಸುವ ಕೆಲಸ ಆಗಬೇಕಿದೆ. ಈ ಪರೀಕ್ಷೆಗೆ ಬೇಕಾಗುವ ಪರಿಕರಗಳನ್ನು ಕನ್ನಡದಲ್ಲಿ ಒದಗಿಸಲು ಅಪಾರ ಮಟ್ಟದ ಶ್ರಮ ಹಾಗೂ ಹಣದ ಅಗತ್ಯವಿರುತ್ತದೆ. ಇದನ್ನು ಒದಗಿಸಲು ಯಾರೂ ಮುಂದೆ ಬಂದಿಲ್ಲದಿರುವುದರಿಂದ ಈ ಕೆಲಸ ಆಗುತ್ತಿಲ್ಲ.

ಅಂತರ್ಜಾಲದಲ್ಲಿಯೂ ಕನ್ನಡದಲ್ಲಿ ಬಹಳಷ್ಟು ಮಾಹಿತಿಗಳು ಲಭ್ಯವಿರುವುದಿಲ್ಲ. ಅಂತರ್ಜಾಲದಲ್ಲಿ ಲಭ್ಯವಿರುವ ಮುಕ್ತ ವಿಶ್ವಕೋಶವಾದ ವಿಕಿಪೀಡಿಯಾದ ಕನ್ನಡ ಪುಟಗಳಲ್ಲಿಯೂ ಹೆಚ್ಚಿನ ಮಾಹಿತಿಗಳು ಲಭ್ಯವಿಲ್ಲ. ಕೆಲವು ಪ್ರಮುಖ ವಿಷಯಗಳ ಬಗ್ಗೆ ಅಗತ್ಯವಿರುವಷ್ಟು ಮಾಹಿತಿಗಳು ಲಭ್ಯವಿರುವುದಿಲ್ಲ. ವಿಕಿಪೀಡಿಯಾದ ಇತರ ದಕ್ಷಿಣ ಭಾರತದ ಭಾಷೆಗಳಲ್ಲಿನ ಪುಟಗಳು ದೀರ್ಘವಾಗಿದ್ದರೂ ಕನ್ನಡ ಭಾಷೆಯ ಪುಟಗಳಲ್ಲಿನ ಮಾಹಿತಿ ಅತ್ಯಲ್ಪ. ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸ್ಥಾಪಿಸಿ ನಿರ್ವಹಿಸುತ್ತಿರುವ ಕಣಜ ಅಂತರಜಾಲ ಕನ್ನಡ ಜ್ಞಾನಕೋಶ ಜಾಲತಾಣದಲ್ಲಿಯೂ ಸ್ಪರ್ಧಾತ್ಮಕ ಪರೀಕ್ಷೆಗಳ ತಯಾರಿಗೆ ಬೇಕಾಗುವ ಮಾಹಿತಿಗಳು ಹೆಚ್ಚಿಲ್ಲ. ಪದವಿಗಳನ್ನು ಕನ್ನಡ ಮಾಧ್ಯಮದಲ್ಲಿ ಪಡೆಯುವವರಿಗೆ ಪಠ್ಯ ಪುಸ್ತಕ ಹಾಗೂ ಗೈಡ್ ಪುಸ್ತಕಗಳು ಕನ್ನಡದಲ್ಲಿದ್ದರೂ ಸಾಕಾಗಲಾರದು. ಪೂರಕ ಮಾಹಿತಿಗಳನ್ನು ಒದಗಿಸುವ ಪುಸ್ತಕಗಳನ್ನೂ ಒದಗಿಸಿಕೊಡಬೇಕಾಗುತ್ತದೆ.ಜೊತೆಗೆ ಪೂರಕ ಮಾಹಿತಿಗಳನ್ನು ಒದಗಿಸುವ ಅಧಿಕೃತ/ನಂಬಲರ್ಹ ಜನಪ್ರಿಯವಾಗಿರುವ ವಿಕಿಪಿಡಿಯಾದಂತಹ ಜಾಲತಾಣಗಳಲ್ಲಿ ಲಭ್ಯವಾಗುತ್ತಿರುವ ಮಾಹಿತಿಗಳ ಕನ್ನಡ ಅವತರಣಿಕೆಗಳನ್ನೂ ಒದಗಿಸುವ  ಕೆಲಸವೂ ಆಗಬೇಕಿದೆ. ಕರ್ನಾಟಕ ಸರ್ಕಾರದ ಕಣಜ ಜಾಲತಾಣದಲ್ಲಿಯೂ ಹೆಚ್ಚಿನ ಮಟ್ಟದ ಮಾಹಿತಿಗಳನ್ನು ತುಂಬಬೇಕಾಗಿದೆ.

ಒಟ್ಟಿನಲ್ಲಿ ಕನ್ನಡ ಮಾಧ್ಯಮದಲ್ಲಿ ಪರೀಕ್ಷೆಗಳನ್ನು ಬರೆಯಲು ಸಿದ್ಧವಿರುವ ಯುವಜನರನ್ನು ಪ್ರೋತ್ಸಾಹಿಸಲು ನಾವೆಲ್ಲರೂ ಶ್ರಮ ವಹಿಸಬೇಕಾಗುತ್ತದೆ.

– ಬಿ.ಆರ್. ರವೀಂದ್ರನಾಥ



# ಪದಚರಿತೆ

### ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

– ಡಾ. ಪಿ.ವಿ. ನಾರಾಯಣ

ಹಿಂದಿನ ಸಂಚಿಕೆಯಿಂದ

**ಮಂತ್ರ: ಮಂತ್ರ** ಎಂಬುದು ರಹಸ್ಯವಾದುದು ಎಂಬರ್ಥವನ್ನೂ ಪಡೆದಿದ್ದುದರಿಂದ ಗ್ರಹ ದೆವ್ವ ಪಿಶಾಚಿ ಬೇತಾಳಗಳಿಂದ ಪೀಡಿತರಾದವರನ್ನು ರಕ್ಷಿಸಲು ಬಳಸುವ ಅಕ್ಷರಸಮೂಹವನ್ನೂ ಮಂತ್ರ ಎಂಬ ಶಬ್ದದಿಂದ ಕರೆಯುವ ರೂಢಿ ಇತ್ತು ಮತ್ತು ಇದೆ. ಕನ್ನಡದಲ್ಲಿ ಇಂತಹ ಪೀಡಕ ಸತ್ವಗಳನ್ನು 'ಗಾಳಿ' ಎಂದೂ ಕರೆಯುತ್ತಿದ್ದರು. ಇವುಗಳನ್ನು ಹೋಗಲಾಡಿಸಬಲ್ಲವರನ್ನು ಮಂತ್ರವಿದರೆಂದೂ ಮಂತ್ರವಾದಿಗಳೆಂದೂ ಮಾಂತ್ರಿಕರೆಂದೂ ಕರೆಯುತ್ತಿದ್ದರು. “ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯಾ, ಬಡತನವೆಂಬ ಮಂತ್ರವಾದಿ ಹೊಗಲು ಒಡನೆ ನುಡಿವರಯ್ಯಾ” [ಗರ=ಗ್ರಹ] ಎಂಬ ಬಸವಣ್ಣನ ಮಾತಿನಲ್ಲಿ ಮಂತ್ರವಾದಿಗಳು ಗ್ರಹಪೀಡಿತರಲ್ಲಿ ಸೇರಿ-ಕೊಂಡ ಗ್ರಹಗಳೊಡನೆ ವ್ಯವಹರಿಸಬಲ್ಲರೆಂಬ ಅರ್ಥವಿದೆ. ಬಸವಣ್ಣನ ಮತ್ತೊಂದು ವಚನದಲ್ಲಿ “ಶೂರತ್ವವುಳ್ಳವನಾತನೇ ಮಾಂತ್ರಿಕನು” ಎಂಬ ಮಾತಿದೆ. ಮಂತ್ರ ಹಾಗೂ ತಂತ್ರಸಿದ್ಧಿಗಳನ್ನು ಹಿಂದೆ ಅರುವತ್ತನಾಲ್ಕು (ಚೌಷಷ್ಟಿ) ವಿದ್ಯೆಗಳಲ್ಲಿ ಸೇರಿಸಿದ್ದರು.

ಇಂಥವರು ಕ್ಷುದ್ರದೈವಗಳನ್ನು ತಮ್ಮ ಕೈವಶಮಾಡಿಕೊಂಡವರು ಎಂಬ ನಂಬಿಕೆಯಿತ್ತು. ಅವುಗಳಿಂದ ಬೇಕಾದಾಗ ಬೇಕಾದ ಕೆಲಸಗಳನ್ನು ಮಾಡಿಸಿಕೊಳ್ಳುವುದು ಹಾಗೂ ಜನರನ್ನು ಮೆಟ್ಟಿದ ಗ್ರಹಗಳನ್ನು ಓಡಿಸುವುದನ್ನು ಮಾಡುತ್ತಿದ್ದರು. ಇದನ್ನು ಮಾಟ ಅಥವಾ ಅಭಿಚಾರ ಎನ್ನುತ್ತಿದ್ದರು. ದುರ್ಯೋಧನನು ಪಾಂಡವರ ವಿರುದ್ಧ ಮಾಟಮಾಡಿಸಿದ ಪ್ರಸಂಗ 'ಪಂಪಭಾರತ'ದಲ್ಲಿದೆ. ಮನುಷ್ಯನನ್ನು ಮೆಟ್ಟಿದ ದೆವ್ವವು ಮಂತ್ರವಾದಿಯನ್ನು ಎದುರಿಸಲಾಗದು ಎಂಬ ಭಾವನೆಯಿತ್ತು (“ಮಂತ್ರವಾದಿಯಂ ಕಂಡ ಗ್ರಹದಂತೆ ಸಮ್ಮುಖದೊಳ್ ನೋಡಲಣ್ಮದಿರೆಯುಂ”– 'ಪಂಚತಂತ್ರ'). ಹೀಗೆ ಮಾಡಬಲ್ಲವರು ಮಾಟಗಾರರೆಂದೂ ಹೆಸರನ್ನು ಪಡೆದವರು. ಇವರು ಹಲವು ವೇಳೆ ಪಿಶಾಚಿಗಳ ಬಾಧೆಯಿಂದ ರಕ್ಷಿಸಲು 'ಯಂತ್ರ'ಗಳನ್ನು ಕಟ್ಟುತ್ತಿದ್ದರು. ಹಾಗಾಗಿ ಇಂಥವರು 'ಯಾಂತ್ರಿಕ'ರೆಂಬ ಹೆಸರಿಗೂ ಪಾತ್ರವಾಗುತ್ತಿದ್ದರು. “ಯಾಂತ್ರಿಕನ ಯಂತ್ರ ಮಂತ್ರ ಸಂಬಂಧದಿಂದ ಪಿಶಾಚಗ್ರಸ್ತನ ಪಿಶಾಚಿಯು ಪಲಾಯನವಪ್ಪ ತೆಱನಂತೆ” ಎಂಬ ಮಾತು ಚೆನ್ನಬಸವಣ್ಣನ ವಚನವೊಂದರಲ್ಲಿದೆ. ಸ್ತ್ರೀ ಮಾಂತ್ರಿಕಳನ್ನು 'ಮಾಟಗಾತಿ' ಎನ್ನುತ್ತಿದ್ದರು. ತಮಗೆ ರೋಗ ಬಂದಾಗ ಮಾಟಗಾತಿಯಲ್ಲಿಗೆ ಹೋಗಿ ಗ್ರಹಗಳಿಗೆ ಶಾಂತಿಕರ್ಮ ಮಾಡಿಸುತ್ತಿದ್ದುದನ್ನು ಮಡಿವಾಳ ಮಾಚಯ್ಯ ಎಂಬ ವಚನಕಾರ ಟೀಕಿಸುತ್ತಾನೆ.

ಯಕ್ಷಿಣಿಯನ್ನು 'ಮಂತ್ರವಾದ'ವೆನ್ನುತ್ತಿದ್ದರು: “ಜ್ಯೋತಿಷ್ಯಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮುಮಂ ಈ ಕೂಸನೋದಿಸಿದಾ” ಎಂಬುದು 'ವಡ್ಡಾರಾಧನೆ'ಯಲ್ಲಿ ಬರುತ್ತದೆ. ಇದನ್ನು ಮಾಡುವವರನ್ನು ಮಂತ್ರವಾದಿಯೆನ್ನುತ್ತಿದ್ದರು: “ಕೊಟ್ಟಂ ಅರ್ಥಿಜನಕ್ಕಾದಿವಿಜೇಂದ್ರಂ ಬಳವಿಯ ಮಂತ್ರವಾದಿಯೆನೆ ಮಕುಟಬದ್ಧ ಸಮಾಜಂ” ಎಂಬ ಮಾತು ಪೊನ್ನನ 'ಶಾಂತಿಪುರಾಣದ್ದು. ಯಕ್ಷಿಣಿಗಾರರು ಹಿಡಿದುಕೊಳ್ಳುತ್ತಿದ್ದ ಕೋಲೇ 'ಮಂತ್ರದಂಡ'.

=====

ಒನೇ ಪುಟಕ್ಕೆ

## ಆಗಸ್ಟ್ ೨೦೨೧ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

ದಿನಾಂಕ : ೧೪ -೦೮-೨೦೨೧ ಶನಿವಾರ ಬೆಳಿಗ್ಗೆ : ೧೧-೦೦ ಗಂಟೆಗೆ
ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ ಪ್ರತಿಷ್ಠಾನ
ಡಾ. ವಿಜಯಾ ಸುಬ್ಬರಾಜ್ ಗಣ್ಯ ಲೇಖಕಿ ಪ್ರಶಸ್ತಿ ಮತ್ತು
ಪ್ರೊ. ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿ ಪ್ರದಾನ ಕಾರ್ಯಕ್ರಮ
ಪ್ರಶಸ್ತಿ ಪ್ರದಾನ: ಡಾ. ನಲ್ಲೂರ್ ಪ್ರಸಾದ್
ಸಾಹಿತಿಗಳು ಮತ್ತುಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರು
ಪ್ರಶಸ್ತಿ ಪುರಸ್ಕೃತರು :
ಗಣ್ಯಲೇಖಕಿ ಪ್ರಶಸ್ತಿ : ಶ್ರೀಮತಿ ಪ್ರೇಮಾಭಟ್, ಖ್ಯಾತ ಲೇಖಕಿ
ವಿಮರ್ಶಾ ಪ್ರಶಸ್ತಿ : ಶ್ರೀ ಚಿದಾನಂದ ಸಾಲಿ, ಖ್ಯಾತ ಲೇಖಕರು

ಜಾಲತಾಣ ಕಾರ್ಯಕ್ರಮ :
ದಿನಾಂಕ : ೧೭-೦೮-೨೦೨೧ ಮಂಗಳವಾರ ಸಂಜೆ : ೪-೩೦ ಗಂಟೆಗೆ
ಶ್ರೀಮತಿ ರುಕ್ಮಿಣಮ್ಮ ಸೀತಾರಾಮರಾವ್ ದತ್ತಿ ಕಾರ್ಯಕ್ರಮ
ಉಪನ್ಯಾಸಕರು : ಡಾ. ಎಚ್. ದಂಡಪ್ಪ
ಖ್ಯಾತ ಸಾಹಿತಿಗಳು ಮತ್ತು ವಾಣಿಜ್ಯ ತೆರಿಗೆ ಇಲಾಖೆಯ ನಿವೃತ್ತ ಅಧಿಕಾರಿ
**ವಿಷಯ : ಕನ್ನಡ ಸಾಹಿತ್ಯದಲ್ಲಿ ಪರಂಪರೆ ಮತ್ತು ಪ್ರತಿಭಟನೆ**

ಜಾಲತಾಣ ಕಾರ್ಯಕ್ರಮ
ದಿನಾಂಕ : ೩೧-೦೮-೨೦೨೧ ಮಂಗಳವಾರ ಸಂಜೆ : ೪-೩೦ ಗಂಟೆಗೆ
ಎ. ಸುಬ್ಬಯ್ಯ ಹೆಗಡೆ ಶಾಸ್ತ್ರೀ-ಯಂ.ಕೆ. ವಿಜಯಲಕ್ಷ್ಮಿ - ಎನ್. ಅನಂತರಂಗಾಚಾರ್-ಅನಂತರಂಗ ಪ್ರತಿಷ್ಠಾನ ದತ್ತಿ ಉಪನ್ಯಾಸ ಕಾರ್ಯಕ್ರಮ
ಮರೆಯಬಾರದ ಸಾಹಿತಿ ಶ್ರೇಷ್ಠರು ಮಾಲಿಕೆ
**ವಿಷಯ: ಕನ್ನಡಕ್ಕೆ ಶ್ರೀ ಎಂ. ಆರ್ . ಶ್ರೀನಿವಾಸಮೂರ್ತಿಅವರ ಕೊಡುಗೆ**
ಉಪನ್ಯಾಸಕರು: ಡಾ. ಎಸ್. ಎಲ್. ಶ್ರೀನಿವಾಸಮೂರ್ತಿ
ಪ್ರಾಧ್ಯಾಪಕರು, ವಿಜಯಾ ಪದವಿ ಪೂರ್ವ ಕಾಲೇಜು

೨ನೇ ಪುಟದಿಂದ

**ಮಂತ್ರ:** ಹಾವು ಮುಂತಾದ ವಿಷಜಂತುಗಳ ವಿಷವನ್ನಿಳುಹಲು ಮಂತ್ರವನ್ನು ಬಳಸುತ್ತಿದ್ದರು. ವಸುಮಿತ್ರನೆಂಬ ಬಾಲಕನಿಗೆ ಹಾವು ಕಚ್ಚಿದಾಗ ಮಂತ್ರವಾದಿಯೊಬ್ಬ 'ಪಱಿಗುಟ್ಟಿ ಮಂತ್ರಿಸಿ' ಅವನನ್ನು ಬದುಕಿಸುವ ಸನ್ನಿವೇಶ 'ವಡ್ಡಾರಾಧನೆ'ಯಲ್ಲಿದೆ. ರಾಜಕುಮಾರನ್ನು ಹಾವು ಕಚ್ಚಿದಾಗ ಶಿವಭೂತಿ ಎಂಬುವವನು "ಗುಂಡಿಗೆಯ ನೀರನಭಿಮಂತ್ರಿಸಿ ತಳಿಯಲೊಡಂ ಕುಮಾರಂ" ನಿರ್ವಿಷನಾದನೆಂದು 'ಪಂಚತಂತ್ರ'ದಲ್ಲಿ ವರ್ಣಿತವಾಗಿದೆ. ಹನ್ನೊಂದನೆಯ ಶತಮಾನದ ಚಾವುಂಡರಾಯನ 'ಲೋಕೋಪಕಾರಂ'ನಲ್ಲಿ ವಿಷವೈದ್ಯ ಪ್ರಕರಣದಲ್ಲಿ ವಿಷವನ್ನಿಳುಹುವ ಎರಡು ಬಗೆಯ ಚಿಕಿತ್ಸೆಗಳ ಬಗ್ಗೆ ವಿಸ್ತಾರವಾದ ಪ್ರಸ್ತಾಪವಿದೆ: "ಓಂ ಹ್ರೀಂ ವಃ ಎಂಬ ಮಂತ್ರದಿನಭಿಮಂತ್ರಿಸಿ ಜಲಮಂ ಮೊಗದೊಳ್ ತಳಿಯೆ ಸಾಧ್ಯಮೆಂದೆಱಿಗೆ ತೆಱಿದೊಡಕ್ಷಿದ್ವಯಮಂ" ಎಂದೂ, ಗಾರುಡ, ವಾಯು ಹಾಗೂ ಗಗನಮಂತ್ರಗಳಿಂದ ಅಭಿಮಂತ್ರಿಸಿದ ನೀರನ್ನು ಚಿಮುಕಿಸಿ ಅಥವಾ ಮಂತ್ರಗಳಿಂದ ಅಭಿಮಂತ್ರಿಸಿದ ನೀರನ್ನು ಕುಡಿಸಿ ವಿಷವಿಳಿಸುವುದು ಒಂದು ಬಗೆಯಾದರೆ, "ಹಾವು ಕೊಳೆ ಕರ್ಣಮಲಮಂ ತೀವುಗೆ ಮೇಣ್ ಕೊಯ್ದು ಕಳೆಗೆ ಪಿಂಡುಗೆ ರಕ್ತಸ್ರಾವಂ ಮಾಡುಗೆ ಚುರ್ಚುಗೆ ನೀವುಗೆ ವಿಷಹರಣಮಲ್ತೆ ತಾತ್ಕಾಲಿಕದೊಳ್" ಎಂದು ಹಾವು ಕಚ್ಚಿದ ಜಾಗದಲ್ಲಿ ಗಾಯಮಾಡಿ ರಕ್ತ ಹೊರತೆಗೆಯುವುದು ಇನ್ನೊಂದು ಬಗೆ. ಇವುಗಳನ್ನು ಬಸವಣ್ಣ ಕ್ರಮವಾಗಿ 'ಮಂತ್ರವೈದ್ಯ' 'ಶಸ್ತ್ರವೈದ್ಯ' ಎಂದು ಕರೆಯುತ್ತಾನೆ: "ಗುರೂಪದೇಶ ಮಂತ್ರವೈದ್ಯ, ಜಂಗಮೋಪದೇಶ ಶಸ್ತ್ರವೈದ್ಯ ನೋಡಾ". ಹಾವು ಕಚ್ಚಿದ ವ್ಯಕ್ತಿಯೂ ಮಂತ್ರವನ್ನು ಉಚ್ಚರಿಸಿದರೆ ವಿಷ ಇಳಿಯುತ್ತದೆಂಬ ನಂಬಿಕೆಯಿತ್ತು: "ಸಂಸಾರವೆಂಬ ಸರ್ಪ ಮುಟ್ಟಲು ಪಂಚೇಂದ್ರಿಯ ವಿಷಯವೆಂಬ ವಿಷದಿಂದ ಆನು ಮುಂದುಗೆಟ್ಟೆನಯ್ಯಾ; .. .. ಓಂ ನಮಶ್ಶಿವಾಯ ಎಂಬ ಮಂತ್ರವ ಜಪಿಸುತ್ತಿದ್ದೆನಯ್ಯಾ" ಎಂಬುದು ಬಸವಣ್ಣನ ಇನ್ನೊಂದು ವಚನ.

ಹಾವನ್ನು ಹಿಡಿಯುವಾಗ ಅದು ಮತ್ತಿಗೊಳಗಾಗುವಂತೆ ಮಂತ್ರವನ್ನು ಹೇಳುತ್ತಿದ್ದರಂತೆ; ಆಗ ಅದರ ಹಲ್ಲಿನ ವಿಷ ಹೋಗುತ್ತಿತ್ತು. "ಹಾವಿನ ಪಲ್ಲ ನಂಜು ಕಿಡುವಂತಿರೆ ಮಾಂತ್ರಿಕ ಮಂತ್ರಶಕ್ತಿಯಿಂ" ಎಂಬ ಹೋಲಿಕೆ ನಾಗಚಂದ್ರನ 'ಪಂಪರಾಮಾಯಣದಲ್ಲಿ ಬರುತ್ತದೆ. ಇದೇ ಕಾವ್ಯದಲ್ಲಿ ಮತ್ತೊಂದೆಡೆ ಹಾವಿನಂತೆ ಗೆರೆಯನ್ನು ಬರೆದು ಮಂತ್ರಶಕ್ತಿಯಿಂದ ವ್ಯಕ್ತಿಯನ್ನು ಮೂರ್ಛೆಗೊಳಿಸುತ್ತಿದ್ದ ಬಗೆಯೂ ವರ್ಣಿತವಾಗಿದೆ: "ಬರೆದು ಉರಗಲೇಖೆ ಮೂರ್ಛಾಪರಿಣತಿಯಂ ಮಂತ್ರಶಕ್ತಿಯಿಂ ಪುಟ್ಟಿಪವೋಲ್". ವಿಷವಿಳಿಸುವ ಮಂತ್ರವನ್ನು ರಚಿಸಿದವನು ಗರುಡನಾದ್ದರಿಂದ ಇದಕ್ಕೆ 'ಗಾರುಡಮಂತ್ರ'ವೆಂಬ ಹೆಸರು ಜನಜನಿತವಾಯ್ತು. ಅದನ್ನು ಬಲ್ಲವನು 'ಗಾರುಡಿಗ'. "ಓರ್ವ ನಿರ್ಬುದ್ಧಿ ಗಾರುಡಿಗಂ ಗಾರುಡಮಂ ಕಲ್ತು ವಿದ್ಯಾಪ್ರಚಯಮಂ ನೋಡಲೆಂದು ಸರ್ಪದಷ್ಟನಂ ಅಱಸುತ್ತುಂ" ಹೋಗುವ ಪ್ರಸ್ತಾಪ 'ಪಂಚತಂತ್ರ'ದಲ್ಲಿ ಬರುತ್ತದೆ.

=====

# ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

೨೯-೦೬-೨೦೨೧

## ಅಗಲಿದ ಕನ್ನಡ ಹಿರಿಯ ಚೇತನಗಳಾದ ಪ್ರೊ. ಜಿ. ವೆಂಕಟಸುಬ್ಬಯ್ಯ, ಡಾ. ಹೆಚ್.ಎಸ್. ದೊರೆಸ್ವಾಮಿ ಪ್ರೊ. ಬಿ.ಎಸ್. ಸಣ್ಣಯ್ಯ, ಡಾ. ಸಿದ್ಧಲಿಂಗಯ್ಯ, ಜರಗನಹಳ್ಳಿ ಶಿವಶಂಕರ್, ಡಾ. ಕೋ.ವೆಂ. ರಾಮಕೃಷ್ಣೇ ಗೌಡ ಇವರುಗಳ ಕುರಿತಾದ ಸಂಸ್ಮರಣೆ ಕಾರ್ಯಕ್ರಮ



'ಕೋವಿಡ್' ಕರಾಳ ಸನ್ನಿವೇಶದ ಪರಿಣಾಮ ಅಕಾಲಿಕವಾಗಿ ಅಗಲಿದ ಎಲ್ಲ ಚೇತನಗಳಿಗೆ ಮಂಗಳವಾರ ಬೆಳಿಗ್ಗೆ ಶ್ರದ್ಧಾಂಜಲಿ ಸಲ್ಲಿಸುವ ಮೂಲಕ ಬೆಂಗಳೂರಿನ ಎನ್.ಆರ್. ಕಾಲೋನಿಯಲ್ಲಿರುವ ಬಿ.ಎಂ.ಶ್ರೀ ಪ್ರತಿಷ್ಠಾನವು ಮಾನವೀಯತೆ ಮೆರೆಯಿತು.

ಪ್ರತಿಷ್ಠಾನದ ಬಿಎಂಶ್ರೀ ಕಲಾಭವನದ ಎಂ.ವಿ.ಸೀ ಸಭಾಂಗಣದಲ್ಲಿ ಆಯೋಜಿಸಲಾಗಿದ್ದ ಸಭೆಯಲ್ಲಿ ಅಗಲಿದ ಹಿರಿಯ ಚೇತನಗಳಾದ ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ, ಶ್ರೀಎಚ್. ಎಸ್.ದೊರೆಸ್ವಾಮಿ, ಡಾ. ಸಿದ್ಧಲಿಂಗಯ್ಯ, ಶ್ರೀ ಜರಗನಹಳ್ಳಿ ಶಿವಂಶಕರ, ಪ್ರೊ. ಬಿ.ಎಸ್. ಸಣ್ಣಯ್ಯ, ಡಾ. ಕೋವೆಂ.ರಾಮಕೃಷ್ಣೇಗೌಡ ಅವರಿಗೆ ನುಡಿನಮನ ಸಮರ್ಪಿಸಲಾಯಿತು.

ಅಗಲಿದ ಹಿರಿಯ ಚೇತನರ ವ್ಯಕ್ತಿಗತ ಬದುಕಿನ ಘನತೆ ಗೌರವ ಹಾಗೂ ಸಾಹಿತ್ಯಕ್ ಎತ್ತರಗಳನ್ನು ಪ್ರಶಂಸಿಸಿದ ಸಭೆಯು, ಅವರ ಸಾಮಾಜಿಕ-ಸಾಹಿತ್ಯಕ -ಸಾಂಸ್ಕೃತಿಕ ಸಂಶೋಧನಾತ್ಮಕ ಕೊಡುಗೆಗಳನ್ನು ಸ್ಮರಿಸಿತು.

ಕನ್ನಡ ಪದಕೋಶ ಸಮೃದ್ಧಿಗೆ ತಮ್ಮದೇ ಆದ ಕೊಡುಗೆ ನೀಡಿದ ಪ್ರೊ. ಜಿ. ವೆಂಕಟಸುಬ್ಬಯ್ಯ, ಸ್ವಾತಂತ್ರ್ಯ ಹೋರಾಟಗಾರರಾಗಿದ್ದೂ ಸರ್ಕಾರಿ ಸೌಲಭ್ಯ ಪಡೆಯದೇ ಸ್ವಾಭಿಮಾನಿಯಾಗಿ ಬದುಕಿ, ಇಳಿವಯಸ್ಸಿನಲ್ಲೂ ಶೋಷಿತರ ಪರ ಹೋರಾಟದ ಮುಂಚೂಣಿಯಲ್ಲಿರುತ್ತಿದ್ದ ಎಚ್. ಎಸ್. ದೊರೆಸ್ವಾಮಿ, ದಲಿತರ ಪರಂಪರಾಗತ ಶೋಷಣೆಗೆ ಶೋಷಣೆಗೆ ಇತಿಶ್ರೀ ಎಂಬಂತೆ ಸಾಹಿತ್ಯ ರಚಿಸಿದ ಸಿದ್ಧಲಿಂಗಯ್ಯನವರ ಸಾತ್ವಿಕ ಸಿಟ್ಟು, ಹನಿಗವನ-ಚುಟುಕುಗಳ ಮೂಲಕ ಕನ್ನಡ ಸಾಹಿತ್ಯಕ್ಕೆ ವೇಗ ನೀಡಿದ ಕವಿ ಜರಗನಹಳ್ಳಿ ಶಿವಶಂಕರ, ಜೈನ ಪರಂಪರೆಯ ಇತಿಹಾಸದ ಮೇಲೆ ಬೆಳಕು ಚೆಲ್ಲಿದ ಪ್ರೊ. ಬಿ.ಎಸ್. ಸಣ್ಣಯ್ಯ, ಗುಣಮಟ್ಟದ ಸಾಹಿತ್ಯ ರಚನೆ ಮೂಲಕ ಕನ್ನಡ ಸಾಹಿತ್ಯಕ್ಕೆ ವೇಗ ನೀಡಿದ ಕವಿ ಜರಗನಹಳ್ಳಿ ಶಿವಶಂಕರ, ಜೈನ ಪರಂಪರೆಯ ಇತಿಹಾಸದ ಮೇಲೆ ಬೆಳಕು ಚೆಲ್ಲಿದ ಪ್ರೊ. ಬಿ.ಎಸ್. ಸಣ್ಣಯ್ಯ, ಗುಣಮಟ್ಟದ ಸಾಹಿತ್ಯ ರಚನೆ ಮೂಲಕ ಗಮನಸೆಳೆದ ಹೋರಾಟಗಾರ ಡಾ.ಕೋ.ವೆಂ. ರಾಮಕೃಷ್ಣೇಗೌಡ ಅವರ ಕೊಡುಗೆಗಳನ್ನು ಸ್ಮರಿಸಿತು.

ಅಗಲಿದ ಈ ಎಲ್ಲ ಚೇತನರ ಒಡನಾಡಿಗಳು, ಓದುಗ ಅಭಿಮಾನಿಗಳು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿ, ದಿವಂಗತರ ಮಾನವೀಯ ನೆಲೆ, ಸಂಸ್ಕಾರ-ಸಂಸ್ಕೃತಿಯ ಮಾದರಿಗಳು ಅನುಕರಣೀಯ ಎಂದು ಅಭಿಪ್ರಾಯಪಟ್ಟರು.

ನಾಡೋಜ ಪ್ರೊ. ಎಂ.ಎಚ್.ಕೃಷ್ಣಯ್ಯ, ಡಾ. ಆರ್. ಲಕ್ಷ್ಮೀನಾರಾಯಣ, ಸಾಹಿತಿಗಳಾದ ಡಾ. ಎಲ್. ಹನುಮಂತಯ್ಯ, ಡಾ. ವಿಜಯಾಸುಬ್ಬರಾಜ್, ಡಾ.ನಳಿನಿ ವೆಂಕಟೇಶ್, ಡಾ. ಹೆಚ್.ಎಸ್. ಎಂ. ಪ್ರಕಾಶ , ಶ್ರೀ ಬಿ.ಆರ್. ರವೀಂದ್ರನಾಥ್, ಡಾ. ಪದ್ಮಿನಿನಾಗರಾಜು ಸೇರಿದಂತೆ ಅನೇಕ ಗಣ್ಯರು, ಅಗಲಿದ ಹಿರಿಯ ಚೇತನರ ಸಾಹಿತ್ಯಿಕ




ಕೊಡುಗೆಗಳನ್ನು ಸ್ಮರಿಸಿದರು. ಡಾ.ಪಿ.ವಿ.ನಾರಾಯಣ ಅವರು ಅಧ್ಯಕ್ಷತೆ ವಹಿಸಿದ್ದರು.

ಡಾ. ಬಿ.ಸಿ. ರಾಜಕುಮಾರ ಅವರು ಕವಿ ಡಾ.ಸಿದ್ಧಲಿಂಗಯ್ಯನವರನ್ನು ಕುರಿತು ರಚಿಸಿದ 'ಪಂಚವರ್ಣದ ಗಿಳಿ' ಕವಿತೆಯನ್ನು ವಾಚಿಸುವ ಮೂಲಕ ಶ್ರದ್ಧಾಂಜಲಿ ಸಲ್ಲಿಸಿ ಕೊನೆಯಲ್ಲಿ ವಂದಿಸಿದರು.

## ಶ್ರೀಮತಿ ರುಕ್ಮಿಣಮ್ಮ ಸೀತಾರಾಮರಾವ್ ದತ್ತಿ

ಕಿರುಪರಿಚಯ

ದಿ. ಶ್ರೀ ಸೀತಾರಾಮರಾಯರು ಶ್ರೀಯುತ ಕೆ.ಜಿ.ಶಾಮರಾಯರು ಮತ್ತು ಶ್ರೀಮತಿ ಭಾಗಮ್ಮನವರ ಎರಡನೇ ಪುತ್ರರಾಗಿ 1904 ರಲ್ಲಿ ಜನಿಸಿದರು. ಅವರಿಗೆ ಸಂಸ್ಕೃತವಲ್ಲದೇ ಹಲವಾರು ಭಾರತೀಯ ಇತರ ಭಾಷೆಗಳನ್ನು ಮಾತನಾಡಲು ಬರುತ್ತಿತ್ತು. ಶ್ರೀ ಸೀತಾರಾಮರಾಯರು 1995ನೇ ಇಸವಿಯಲ್ಲಿ ತಮ್ಮ 91ನೇ ವಯಸ್ಸಿನಲ್ಲಿ ನಿಧನರಾದರು.

## ಶ್ರೀಮತಿ ಎಸ್.ಕೆ. ಪ್ರೇಮ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ



ಪ್ರಸಿದ್ಧಕವಿ, ವಿಮರ್ಶಕ ವಿದ್ವಾಂಸರಾದ ಪ್ರೊ.ಜಿ.ಎಸ್.ಸಿದ್ಧಲಿಂಗಯ್ಯನವರ ಧರ್ಮಪತ್ನಿಯಾದ ಪ್ರೇಮ ಅವರು ಸಕಲೇಶಪುರದ ಶ್ರೀ ಶಾಂತಮಲ್ಲಯ್ಯ ಮತ್ತು ಶ್ರೀಮತಿ ಚೆನ್ನಮ್ಮನವರ ಆರನೇ ಪುತ್ರಿ. ಇವರ ಹೆಸರಿನಲ್ಲಿ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು ಪ್ರತಿವರ್ಷ ಜೂನ್ ತಿಂಗಳಿನಲ್ಲಿ ದತ್ತಿ ಉಪನ್ಯಾಸ ಏರ್ಪಡಿಸಲು ಪ್ರತಿಷ್ಠಾನದಲ್ಲಿ ಒಂದು ಲಕ್ಷ ರೂಗಳ ದತ್ತಿಯನ್ನು ಸ್ಥಾಪಿಸಿದ್ದಾರೆ.

೮-೦೭-೨೦೨೧

## ಶ್ರೀಮತಿ ಎಸ್.ಕೆ. ಪ್ರೇಮ ಪ್ರೊ. ಜಿ.ಎಸ್.ಸಿದ್ಧಲಿಂಗಯ್ಯ ದತ್ತಿ ಕಾರ್ಯಕ್ರಮ

### 'ಕನ್ನಡದ ವಚನ ಕಾರ್ತಿಯರು ಉಪನ್ಯಾಸ ಮಾಲಿಕೆ'

### ಉದ್ಘಾಟನೆ ಮತ್ತು ಉಪನ್ಯಾಸ :

### ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ

**ಖ್ಯಾತ ಸಾಹಿತಿಗಳು, ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರು**

"ಪ್ರೊ. ಸಿದ್ಧಲಿಂಗಯ್ಯನವರು ಪ್ರತಿಷ್ಠಾನದೊಂದಿಗೆ ಲಾಗಾಯ್ತಿನಿಂದಲೂ ನಿಕಟ ಸಂಪರ್ಕವಿರಿಸಿಕೊಂಡಿದ್ದು ಎಲ್ಲರಿಗೂ ಚಿರಪರಿಚಿತರೇ ಆಗಿದ್ದಾರೆ. ೨೦೨೧ರ ಪ್ರತಿಷ್ಠಿತ ಶ್ರೀ ಸಾಹಿತ್ಯ ಪ್ರಶಸ್ತಿಯನ್ನು ಪ್ರತಿಷ್ಠಾನದ ವತಿಯಿಂದ ಅವರಿಗೆ ನೀಡಿದಾಗ ಅಂದೇ ಅವರದೇ ಮಾತಿನಲ್ಲಿ ಹೇಳುವುದಾದರೆ " ಕೆರೆಯ ನೀರನು ಕೆರೆಗೆ ಚೆಲ್ಲಿ" ಎನ್ನುವ ಹಾಗೆ ಪ್ರಶಸ್ತಿಯ ಮೊತ್ತವಾದ ಒಂದು ಲಕ್ಷ ರೂಪಾಯಿಗಳನ್ನು ತಮ್ಮ




ಶ್ರೀಮತಿಯವರಾದ ಎಸ್. ಕೆ. ಪ್ರೇಮ ಅವರ ಹೆಸರಿನಲ್ಲಿ ದತ್ತಿಯನ್ನು ಸ್ಥಾಪಿಸುವ ಸಲುವಾಗಿ ಪ್ರತಿಷ್ಠಾನಕ್ಕೇ ನೀಡುವುದಾಗಿ ಘೋಷಿಸಿದರು. ಅದರಂತೆ ಈ ದತ್ತಿ ಸ್ಥಾಪನೆಯಾಗಿದ್ದು ಇಂದು ಅದರ ಅಡಿಯಲ್ಲಿ ಈ ಮಾಲೆಯ ಮೊದಲ ಉಪನ್ಯಾಸ ಏರ್ಪಾಟಾಗಿದ್ದು ಪ್ರೊ. ಸಿದ್ಧಲಿಂಗಯ್ಯ ದಂಪತಿಗಳು ನಮ್ಮೊಂದಿಗೆ ಇರುವುದು ಅತ್ಯಂತ ಸಂತಸ ತಂದಿದೆ. ಈ ದತ್ತಿ ಉಪನ್ಯಾಸವನ್ನು ಉದ್ಘಾಟಿಸಿ ಮೊದಲ ಉಪನ್ಯಾಸವನ್ನು ಮಾಡಬೇಕೆಂದು ಇಲ್ಲಿ ಸೇರಿರುವ ಎಲ್ಲರ ಪರವಾಗಿ ಮತ್ತು ಇದನ್ನು ಆನ್ ಲೈನ್ ಮೂಲಕ ವೀಕ್ಷಿಸುತ್ತಿರುವ ಎಲ್ಲರ ಪರವಾಗಿ ಪ್ರೊ. ಸಿದ್ಧಲಿಂಗಯ್ಯನವರನ್ನು ಈ ಕಾರ್ಯಕ್ರಮಕ್ಕೆ ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ ಎಂದು ಅತಿಥಿಗಳನ್ನು ಸ್ವಾಗತಿಸಿ ಡಾ. ಆರ್. ಲಕ್ಷ್ಮೀನಾರಾಯಣ ಅವರು ಮೇಲಿನಂತೆ ಹೇಳಿ ಪ್ರೊ. ಸಿದ್ಧಲಿಂಗಯ್ಯನವರನ್ನು ಸಂಕ್ಷಿಪ್ತವಾಗಿ ಪರಿಚಯಿಸಿದರು.

ಪ್ರೊ. ಸಿದ್ಧಲಿಂಗಯ್ಯನವರು ತಮ್ಮ ಮಾತನ್ನು ಪ್ರಾರಂಭಿಸುತ್ತ ವಚನಸಾಹಿತ್ಯದ ಅಪೂರ್ವತೆಯೆಂದರೆ-ಓಟದ ಸ್ಪರ್ಧೆಯೊಂದು ಏರ್ಪಟ್ಟಾಗ ಎಲ್ಲರಂತೆ ಅವರೂ ಓಡಿದರು ಎಂಬ ಅರ್ಥದಲ್ಲಿ " ದೇ ಆಲ್ಸೋ ರ್‍ಯಾನ್" ಅಲ್ಲ. ವಚನಕಾರ್ತಿಯರನ್ನು ಕೇಳಿದರೆ " ವಿ ಆಲ್ಸೋ ರ್‍ಯಾನ್ ಅಲ್ಲ. ವಿ ಡಿಡ್ ರನ್, ಬಟ್ ಅಲಾಂಗ್ ವಿತ್ ಬಸವ, ಅಲ್ಲಮ, ಸಿದ್ಧರಾಮ ಅಂಡ್ ಅದರ್ಸ್ ಎನ್ನುತ್ತಿದ್ದರು. ಅಲ್ಲಮನಂಥ ಮಹಾ ಜ್ಞಾನಿಯನ್ನೇ ಪ್ರಶ್ನಿಸಿದ ವಚನಕಾರ್ತಿಯರಿದ್ದಾರೆ. ಅವನಿಗೇ ಬೆರಗು ಮೂಡಿಸಿದವರೂ ಇದ್ದಾರೆ. ೧೫೦ ವಚನಕಾರರಲ್ಲಿ ೩೫ ಜನ ವಚನಕಾರ್ತಿಯರಿದ್ದಾರೆ. ಅವರೆಲ್ಲರೂ ನಾವು ನಿಮಗಿಂತ ಯಾವ ರೀತಿಯಲ್ಲೂ ಕೀಳಾದವರಲ್ಲ ಎಂದು ಸಾರಿದವರು. ಪತಿ ಪತ್ನಿಯರಿಬ್ಬರೂ ವಚನಕಾರರಾಗಿದ್ದ ಜೋಡಿಗಳಿದ್ದಾರೆ. ದಾಸಿಮಯ್ಯ ದುಗ್ಗಳೆ, ಬಸವಣ್ಣ-ನೀಲಮ್ಮ, ಉರಿಲಿಂಗಪೆದ್ದಿ-ಕಾಳವ್ವ. ಹೀಗೆ. ಅದರಲ್ಲಿ ಎರಡೆರಡು ವಚನ ಮಾತ್ರ ಬರೆದವರು, ಒಂದೊಂದು ವಚನ ಮಾತ್ರ ಬರೆದವರು ಇದ್ದಾರೆ. ಸಮಾಜದ ಅತ್ಯಂತ ಕೆಳವರ್ಗದ ಸೂಳೆ ಸಂಕವ್ವನಂಥವಳಿಂದ ಹಿಡಿದು ಅಕ್ಕಮಹಾದೇವಿಯವರೆಗೆ ಎಲ್ಲ ವರ್ಗದವರಿದ್ದಾರೆ.

ವಚನಕಾರ್ತಿ ಮಸಣಮ್ಮ " ಹೆಣ್ಣಬಿಟ್ಟು ಲಿಂಗವ ಪೂಜಿಸಬೇಕೆಂಬುವರು ನೀವು ಹೇಳಿರೆ, ಹೆಣ್ಣಿಗೂ ಲಿಂಗ-ಕ್ಕೆಯೂ ವಿರೋಧವೆ? ಎಂದು ಪ್ರಶ್ನಿಸುತ್ತ ಅಂಗವ ಬಿಟ್ಟು ಲಿಂಗವ ಪೂಜಿಸಬೇಕೆಂಬವರು ನೀವು ಹೇಳಿರೆ ಅಂಗಕ್ಕೆಯೂ ಲಿಂಗಕ್ಕೆಯೂ ವಿರೋಧವೆ? ಎಂದು ಸವಾಲು ಹಾಕುತ್ತಾಳೆ. ಈ ವಚನ ಕಾರ್ತಿಯರು ಸಾಮಾನ್ಯರಲ್ಲ. ಸಾಮಾಜಿಕ ಕ್ರಾಂತಿಗೆ ಕಾರಣರಾದ ವ್ಯಕ್ತಿಗಳು. ಉರಿಲಿಂಗಪೆದ್ದಿಯ ಪುಣ್ಯಸ್ತ್ರೀ ಕಾಳವ್ವೆ ಕುರಿಕೋಳಿ ಕಿರುಮೀನು ತಿಂಬವರಿಗೆಲ್ಲ ಕುಲಜ ಕುಲಜರೆಂಬರು ಶಿವಗೆ ಪಂಚಾಮೃತವ ಕರೆವ ಪಶುವ ತಿಂಬ ಮಾದಿಗ ಕೀಳುಜಾತಿಯೆಂಬರು.

ಅವರೆಂತು ಕೀಳು ಜಾತಿಯಾದರು ಜಾತಿಗಳು ನೀವೇಕೆ ಕೀಳಾದಿರೊ?

ಬ್ರಾಹ್ಮನುಂಡುದು ಪುಲ್ಲಿಗೆ ಶೋಭಿತವಾಗಿ ನಾಯಿ ನೆಕ್ಕಿಹೋಯಿತು

ಹೀಗೆ ಸಾಗಿ ಕೊನೆಗೆ "ಸಗ್ಗಲೆಯ ನೀರನು ಶುದ್ಧವೆಂದು ಕುಡಿವ




ಬುದ್ದೀಗೇಡಿ ವಿಪ್ರರಿಗೆ ನಾಯಕನರಕ ತಪ್ಪದಯ್ಯಾ" ಎಂದು ಖಡಾ ಖಂಡಿತವಾಗಿ ಹೇಳುತ್ತಾಳೆ.

ಆಧ್ಯಾತ್ಮಕ್ಕೆ ಬಂದರೆ ಆಯ್ದಕ್ಕಿ ಮಾರಯ್ಯ ಕಾಯಕ ಮರೆತು ಕೂತದ್ದಕ್ಕೆ ಅವನ ಹೆಂಡತಿ ಆಯ್ದಕ್ಕಿ ಲಕ್ಕಮ್ಮ ಎಚ್ಚರಿಸುತ್ತಾಳೆ.

ಅಲ್ಲಿಗೆ ಹೋಗೋಣವೆಂಬ ಮೋಳಿಗೆ ಮಾರಯ್ಯನಿಗೆ ಅವನ ಹೆಂಡತಿ "ಅಲ್ಲಿ ಇಲ್ಲಿ ಎಂಬ ಉಭಯವೇಕೆ ಇಲ್ಲಿಗೆ ಕರ್ಮ ಅಲ್ಲಿಗೆ ನಿಷ್ಕರ್ಮವೆ?" ಎಂದು ಚಾಟಿಯೇಟಿನಂಥ ಮಾತಾಡುತ್ತಾಳೆ. "ಹದ ತಪ್ಪಿ ಕೊಟ್ಟಣವ ಕುಟ್ಟಿದರೆ ದೊರೆವುದು ನುಚ್ಚಲ್ಲದೆ ಅಕ್ಕಿಯಲ್ಲ ಎಂಬ ವಚನಕಾರ್ತಿಯ ಮಾತು ಬದುಕಿಗೂ ಅನ್ವಯ. ಹೀಗೆ ಅತ್ಯಂತ ವಿಚಾರಪರವಾದ ವಚನಗಳನ್ನು ಉದಾಹರಿಸಿ ವಚನ ಕಾರ್ತಿಯರ ವಿಶಿಷ್ಟತೆಯನ್ನು ಮನಮುಟ್ಟುವಂತೆ ವಿವರಿಸಿದರು.

ಕೊನೆಯಲ್ಲಿ ಡಾ. ಬಿ. ಸಿ. ರಾಜ್‌ಕುಮಾರ್ ಎಲ್ಲರಿಗೂ ವಂದನೆ ಸಲ್ಲಿಸಿದರು..

೧೫-೦೭-೨೦೨೧

## ರಾಸ ಸಾಹಿತ್ಯ– ಡಿ.ಲಿಂಗಯ್ಯ, ಟಿ.ಎಸ್.ವೆಂಕಣ್ಣಯ್ಯ, ತೀ.ನಂ.ಶ್ರೀ–ಶಾರದಮ್ಮ ಹನುಮಯ್ಯ ದತ್ತಿ ಕಾರ್ಯಕ್ರಮ

### ವಿಷಯ : ಜನಪದ ಸಾಹಿತ್ಯಕ್ಕೆ ಪ್ರೊ. ಡಿ. ಲಿಂಗಯ್ಯನವರ ಕೊಡುಗೆ

### ಉಪನ್ಯಾಸಕರು : ಪ್ರೊ. ಶಾಂತರಾಜು, ಪ್ರಾಧ್ಯಾಪಕರು, ವಿಜಯ ಸಂಜೆ ಕಾಲೇಜು

ಕಾರ್ಯಕ್ರಮದ ಪ್ರಾರಂಭದಲ್ಲಿ ಡಾ. ಆರ್. ಲಕ್ಷ್ಮೀನಾರಾಯಣ ಅವರು ಸ್ವಾಗತಕೋರಿದರು. ಈ ಕಾರ್ಯಕ್ರಮ ಐದು ಸಂಕೀರ್ಣ ದತ್ತಿಗಳ ಕಾರ್ಯಕ್ರಮವಾಗಿದ್ದು, ಸರದಿಯಂತೆ ಪ್ರತಿವರ್ಷ ಒಬ್ಬೊಬ್ಬರನ್ನು ಕುರಿತಂತೆ ಕಾರ್ಯಕ್ರಮ ಆಯೋಜಿಸುತ್ತಿರುವುದಾಗಿ ತಿಳಿಸಿದರು. ನಮ್ಮ ಪ್ರತಿಷ್ಠಾನದ ಅಧ್ಯಕ್ಷ ಸ್ಥಾನವನ್ನು ಎರಡು ವರ್ಷಗಳ ಕಾಲ ಯಶಸ್ವಿಯಾಗಿ ನಿರ್ವಹಿಸಿದ್ದ ಪ್ರೊ. ಡಿ. ಲಿಂಗಯ್ಯನವರು, ಸಾಹಿತ್ಯದ ವಿವಿಧ ಆಯಾಮಗಳಲ್ಲಿ ಸೇವೆಸಲ್ಲಿಸಿದ್ದರೂ, ಜನಪದ ಸಾಹಿತ್ಯ, ಸಂಸ್ಕೃತಿಯ ವ್ಯಾಖ್ಯಾನ, ಕ್ಷೇತ್ರಕಾರ್ಯ ಮತ್ತು ಸ್ಥಳನಾಮ ಅಧ್ಯಯನದಲ್ಲಿ ವಿಶಿಷ್ಟ ಸಾಧನೆಯನ್ನು ಮಾಡಿದವರು. ಜಾನಪದ ಕ್ಷೇತ್ರದಲ್ಲಿ ಲಿಂಗಯ್ಯನವರ ಅಪಾರ ಸಾಧನೆಗಳನ್ನು ಕನ್ನಡಿಗರಿಗೂ ಹಾಗೂ ಯುವ ಪೀಳಿಗೆಗೂ ಪರಿಚಯಸುವ ದೃಷ್ಟಿಯಿಂದ, ಆ ವಿಚಾರವಾಗಿ ಪ್ರೊ. ಶಾಂತರಾಜು ಅವರು ಉಪನ್ಯಾಸ ನೀಡಲು ಸಮ್ಮತಿಸಿದರು. ಅದರ ಫಲವೇ ಇಂದಿನ ಉಪನ್ಯಾಸವನ್ನು ಆಯೋಜಿಸುವಲ್ಲಿ ಸಾಧ್ಯವಾಯಿತು ಎಂದು ಹೇಳಿ, ಪ್ರೊ. ಶಾಂತರಾಜು ಅವರ ಸಾಹಿತ್ಯ ಸೇವೆ, ಅವರ ಪ್ರಕಟಣೆಗಳು ಮತ್ತು ಅಭಿನಯ ಕ್ಷೇತ್ರದಲ್ಲೂ ಅವರ ಸಾಧನೆಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿ, ಉಪನ್ಯಾಸ ನೀಡಲು ಸ್ವಾಗತಿಸಿದರು.

ಜನಪದ ಸಾಹಿತ್ಯದ ಕಣಜದೆಂದೇ ಗುರುತಿಸಿಕೊಳ್ಳುವ ಮಂಡ್ಯ ಜಿಲ್ಲೆ ಹಳ್ಳಿಯೊಂದರಲ್ಲಿ ಲಿಂಗಯ್ಯನವರು ಜನಿಸಿ, ಸತತವಾಗಿ ಐದು ದಶಕಗಳ ಸಾಹಿತ್ಯಸೇವೆ ಸಲ್ಲಿಸಿದ ವ್ಯಕ್ತಿ ಅವರ ಜ್ಞಾಪಕ ಶಕ್ತಿ ಪ್ರಖರವಾಗಿತ್ತು. ಅವರದು ಸರಳನಡೆ. ಎಂಬತ್ತಕ್ಕೂ ಹೆಚ್ಚಿನ ಕೃತಿಗಳು ಅವರ ಸಾಹಿತ್ಯ ಕ್ಷೇತ್ರದ ಕೊಡುಗೆ. ಇದರಲ್ಲಿ ೨೧ ಜಾನಪದ ಸಂಬಂಧಿತ ಕೃತಿಗಳೇ ಆಗಿವೆ. ಜೀವನ ಚರಿತ್ರೆಗಳು, ಕಥಾಸಂಗ್ರಹಗಳು, ವಿಮರ್ಶಾಗ್ರಂಥಗಳು, ಎರಡು ಕಾದಂಬರಿಗಳು ಹೀಗೆ ಹಲವಾರು ಅವರ ಪಾಂಡಿತ್ಯಕ್ಕೆ ಸಾಕ್ಷಿಯಾಗಿವೆ. ಲಿಂಗಯ್ಯನವರ ಮೇಲೆ ಜಾನಪದದ ಪ್ರಭಾವ ಗಾಢವಾಗಿತ್ತೆಂದು ಅವರ ಜಾನಪದ ಕೃತಿಗಳಿಂದಲೇ ವೇದ್ಯವಾಗುತ್ತದೆ. ಕರ್ನಾಟಕದ ಜಾನಪದ ಸಾಹಿತ್ಯ, ಅಗಾದವಾದದ್ದು. ವಿದ್ಯಾರ್ಥಿಗಳ ಸಂಶೋಧನೆಗೆ ವಿಫಲವಾದ ಅವಕಾಶವಿರುವುದಾಗಿ ಮೇಲಿಂದ ಮೇಲೆ ಹೇಳುತ್ತಿದ್ದರು ಎಂದು ಶಾಂತರಾಜು ಅವರು ಜ್ಞಾಪಿಸಿಕೊಂಡರು ಜಾನಪದ ಕ್ಷೇತ್ರದಲ್ಲಿ ಲಿಂಗಯ್ಯನವರ ಕ್ಷೇತ್ರಕಾರ್ಯದ ವೈಖರಿ, ವಸ್ತು ಸಂಗ್ರಹಿಸುವಿಕೆಯಲ್ಲಿ ಅವರ ನೈಪುಣ್ಯತೆ ಮತ್ತು ಸಹನಾ ಶಕ್ತಿಯನ್ನು ಕೆಲವು ಸ್ವಾರಸ್ಯಕರ ಘಟನೆಗಳೊಂದಿಗೆ ರಸವತ್ತಾಗಿ ಬಣ್ಣಿಸಿದರು. ಲಿಂಗಯ್ಯ ಅವರು ರಚಿಸಿರುವ ಪಿರಿಯಾಪಟ್ಟಣದ ಜಗಳ, ಬೋರೆದೇವರು, ಕೋಲಾಟಗಳು, ಬಯಲು ಸೀಮೆಯ ಜನಪದ ಗೀತೆಗಳು, ಇವುಗಳನ್ನು ಕುರಿತು ಹೇಳಿ ಮಲ್ಲಿಗೆ ಮಹಾದೇವಿಯ ಕಥಾವಸ್ತುವಿಗೂ ಇದಕ್ಕೂ ಇರುವ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ವಿವರವಾಗಿ ತಿಳಿಸಿದರು. ಜೀಶಂಪ ಅವರು ಪಿರಿಯಾಪಟ್ಟಣದ ಘಟನೆಯನ್ನು ಕಾಳಗವೆಂದು ಬಣ್ಣಿಸಿರುವುದನ್ನು ಲಿಂಗಯ್ಯನವರು ಒಪ್ಪದೆ, ಅದು ಜನಪದ ದೃಷ್ಟಿಯಲ್ಲಿ ಜಗಳವೆನ್ನುವುದೇ ಸಮಂಜಸವೆಂದು ಸಮರ್ಪಕವಾಗಿ ತಿಳಿಸಿದ್ದಾರೆ.




ತಮ್ಮ ಉಪನ್ಯಾಸದಲ್ಲಿ ಸಂದರ್ಭಕ್ಕನುಗುಣವಾಗಿ ಜಾನಪದ ಶೈಲಿಯಲ್ಲಿ ಜನಪದ ಗೀತೆಯ ಕೆಲವು ಸಾಲುಗಳನ್ನು ವಾಚಿಸಿ ತಮ್ಮ ಉಪನ್ಯಾಸಕ್ಕೆ ಮೆರಗನ್ನು ನೀಡಿದರು. ಜಾನಪದ ಸಾಹಿತ್ಯದ ಮೂಲನೆಲೆ, ರಂಜನೆ; ಲೋಕಹಿತ. ಜಾನಪದಕ್ಕೆ ಕೊನೆಯಿಲ್ಲ. ಜಾನಪದಕ್ಕೆ ಬದಲಾವಣೆಗಳನ್ನು ಒಪ್ಪಿಕೊಳ್ಳುವ ಶಕ್ತಿಯಿದೆ, ಬದಲಾವಣೆಗಳನ್ನು ರೂಢಿಸಿಕೊಳ್ಳುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿ ತಮ್ಮ ಉಪನ್ಯಾಸವನ್ನು ಮುಕ್ತಾಯಗೊಳಿಸಿದರು. ಅನಂತರ ನಡೆದ ಚರ್ಚೆಯಲ್ಲಿ ಡಾ.ಪಿ.ವಿ. ನಾರಾಯಣ ಅವರು ಸಕ್ರಿಯವಾಗಿ ಪಾಲ್ಗೊಂಡು ಹಲವಾರು ಸಲಹೆಗಳನ್ನು ನೀಡಿದರು. ಡಾ. ಬಿ.ಸಿ.ರಾಜಕುಮಾರ್ ಅವರು ಸರ್ವರಿಗೂ ವಂದಿಸಿದರು.

### ಪ್ರಕಟಣೆ

### ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ
### ಮತ್ತು
### ಶಾ.ಬಾಲುರಾವ್ ಅನುವಾದ ಪ್ರಶಸ್ತಿಗಾಗಿ ಕೃತಿಗಳ ಆಹ್ವಾನ

ಬಿ.ಎಂ.ಶ್ರೀ.ಪ್ರತಿಷ್ಠಾನವು ಪ್ರತಿವರ್ಷ ನೀಡುವ ಇಪ್ಪತ್ತೈದು ಸಾವಿರರೂಪಾಯಿಗಳ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುವ ಶಾ.ಬಾಲೂರಾವ್ ಯುವಬರಹಗಾರ ಪ್ರಶಸ್ತಿಗಾಗಿ ೩೫ ವರ್ಷ ವಯಸ್ಸು ಮೀರದ ಯುವ ಬರಹಗಾರರು ರಚಿಸಿದ, ೨೦೨೦ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಸಾಹಿತ್ಯದ ಯಾವುದೇ ಪ್ರಕಾರದ ಕೃತಿಗಳನ್ನು ಆಹ್ವಾನಿಸುತ್ತಿದೆ.

ಹಾಗೆಯೇ –

ಬಿ.ಎಂ.ಶ್ರೀ. ಪ್ರತಿಷ್ಠಾನವು ಪ್ರತಿವರ್ಷ ನೀಡುವ ಇಪ್ಪತ್ತೈದು ಸಾವಿರರೂಪಾಯಿಗಳ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುವ ಶಾ.ಬಾಲೂರಾವ್ ಅನುವಾದ ಪ್ರಶಸ್ತಿಗಾಗಿ ೨೦೨೦ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ, ಬೇರಾವುದೇ ಭಾಷೆಯಿಂದ ಕನ್ನಡಕ್ಕೆ ಅನುವಾದವಾಗಿರುವ ಕೃತಿಗಳನ್ನು ಆಹ್ವಾನಿಸುತ್ತಿದೆ.

ಆಸಕ್ತ ಲೇಖಕರು ಅಥವಾ ಅವರ ಪರವಾಗಿ ಪ್ರಕಾಶಕರು ಅಥವಾ ಮಿತ್ರರು ಪ್ರಕಟಗೊಂಡ ಕೃತಿಯ ಮೂರು ಪ್ರತಿಗಳನ್ನು ಅವರ ವಿವರಗಳ ಜೊತೆಗೆ ಬಿ.ಎಂ.ಶ್ರೀ ಪ್ರತಿಷ್ಠಾಕ್ಕೆ ಕಳುಹಿಸಬಹುದು. ಕೊನೆಯ ದಿನಾಂಕ : **ಆಗಸ್ಟ್ ೧೬ ೨೦೨೧**

**ಸಂಪರ್ಕಸಿ : ೦೮೦-೨೬೬೧೫೮೭೭**

ಕಿರುಪರಿಚಯ

### ಶ್ರೀಮತಿ ಶಾಂತಾ ನಾಗಮಂಗಲ



ವಿದ್ಯಾಭ್ಯಾಸ : ಬಿ.ಎಸ್ಸಿ. ಎಮ್. ಎ. (ಕನ್ನಡ),ಎಮ್.ಎ. (ಹಿಂದಿ), ಎಮ್.ಫಿಲ್(ಹಿಂದಿ), ಎಮ್.ಎ(ಸಂಸ್ಕೃತ) ಕಥೆ, ಕವನ, ಲೇಖನಗಳನ್ನು ಬರೆಯುವ ಹವ್ಯಾಸ"ಕೀರ್ತನಕಲೆ ಮತ್ತು ಗಮಕಕಲೆ– ಒಂದು ತೌಲನಿಕ ಅಧ್ಯಯನ" ಎಂಬ ಫೆಲೋಶಿಪ್ ಪ್ರಬಂಧವು ಪುಸ್ತಕವಾಗಿ ಕರ್ನಾಟಕ ಸಂಗೀತ ನೃತ್ಯ ಅಕಾಡಮಿಯಿಂದ ಪ್ರಕಟಗೊಂಡಿದೆ.

ಸುಮಾರು ೧೦ ವರ್ಷಗಳಿಂದ ಗಮಕವಾಚನಕ್ಕೆ ವ್ಯಾಖ್ಯಾನ ಮಾಡುತ್ತಾ ಬಂದಿದ್ದಾರೆ. ಈಗ ಅದೇ ಪ್ರಮುಖ ಪ್ರವೃತ್ತಿಯಾಗಿದೆ. "ಕರ್ನಾಟಕ ರಾಜ್ಯ ಗಮಕಕಲಾ ಪರಿಷತ್ತಿ" ನ ಮಾಜಿ ಕಾರ್ಯದರ್ಶಿ.

"ಶಾಂತಾರಾಮ್ ದತ್ತಿನಿಧಿ ಪ್ರಶಸ್ತಿ"ಯು ನಾಡಿನ ಪ್ರಸಿದ್ಧ ವಾಚನಕಾರರಾದ ಶ್ರೀ ಚಂದ್ರಶೇಖರ ಕೆದಿಲಾಯರರ ಜೊತೆಗೆ ಇವರಿಗೂ ದೊರೆತಿದೆ.

### ಶ್ರೀಮತಿ ಮಂಜುಳಾ ಮರಾಠೆ



ಶ್ರೀಮತಿ ಮಂಜುಳಾ ಮರಾಠೆ ಇವರ ತಮ್ಮ ಗಮಕ ಶಿಕ್ಷಣವನ್ನು ಕಲಾಶ್ರೀ ಶ್ರೀಮತಿ ಗಂಗಮ್ಮ ಕೇಶವಮೂರ್ತಿ ಇವರಲ್ಲಿ ಪಡೆದಿರುತ್ತಾರೆ.ನಾಡಿನ ಅನೇಕ ಕಡೆಗಳಲ್ಲಿ ಕಾರ್ಯಕ್ರಮಗಳನ್ನು ಕೊಟ್ಟಿದ್ದಾರೆ .ಆಕಾಶವಾಣಿಯ ಗಮಕ ಕಲಾವಿದೆಯಾಗಿರುವ ಇವರು.ಆಯುರ್ವೇದ ವೈದ್ಯರು ಹಾಗೂ ಯೋಗಶಿಕ್ಷಕರೂ ಕೂಡಾ ಆಗಿದ್ದಾರೆ.




# ಪತ್ರಿಕಾ ನೆನಪು




## ನಗರದಲ್ಲಿ ಇಂದು 15/4/21

ಉಪನ್ಯಾಸ: ಶ್ರೀಮತಿ ರುಕ್ಮಿಣಮ್ಮ-ಸೀತಾರಾಮ್ ದತ್ತಿ ಕಾರ್ಯಕ್ರಮ, ವಿಷಯ: ಮಧುರ ಚೆನ್ನ: ವ್ಯಕ್ತಿ ಮತ್ತು ಸಾಹಿತ್ಯ, ಉಪನ್ಯಾಸಕರು: ಲೇಖಕ ಬೈರಮಂಗಲ ರಾಮೇಗೌಡ, ಪ್ರಾಸ್ತಾವಿಕ ನುಡಿ: ಆರ್. ಲಕ್ಷ್ಮೀನಾರಾಯಣ, ಕಾರ್ಯಕ್ರಮ ಸಂಯೋಜನೆ: ಬಿ.ಸಿ. ರಾಜಕುಮಾರ್, ಆಯೋಜನೆ: ಬಿ.ಎಂ.ಶ್ರೀ. ಪ್ರತಿಷ್ಠಾನ, ಸಂಜೆ 4.30 (ಆನ್‌ಲೈನ್ ಕಾರ್ಯಕ್ರಮ)

ಜಿ.ವೆಂಕಟಸುಬ್ಬಯ್ಯ, ಎಚ್.ಎಸ್.ದೊರೆಸ್ವಾಮಿ, ಕವಿ ಸಿದ್ದಲಿಂಗಯ್ಯ, ಬಿ.ಎಸ್.ಸಣ್ಣಯ್ಯ, ಜರಗನಹಳ್ಳಿ ಶಿವಶಂಕರ್, ಕೋ.ವೆಂ. ರಾಮಕೃಷ್ಣೇಗೌಡ ಅವರಿಗೆ ನುಡಿನಮನ: ಅಧ್ಯಕ್ಷತೆ-ಸಾಹಿತಿ ಪಿ.ವಿ. ನಾರಾಯಣ, ಭಾಗವಹಿಸುವವರು-ಎಲ್.ಹನುಮಂತಯ್ಯ, ವಿಜಯಾ ಸುಬ್ಬರಾಜ್, ನಳಿನಿ ವೆಂಕಟೇಶ್, ಪದ್ಮಿನಿ ನಾಗರಾಜು, ಎಚ್.ಎಸ್. ಎಂ.ಪ್ರಕಾಶ್, ಬೈರಮಂಗಲ ರಾಮೇಗೌಡ, ಪ್ರೊ.ಶಾಂತರಾಜು, ಬಿ.ಆರ್.ರವೀಂದ್ರನಾಥ್, ಆಯೋಜನೆ-ಬಿಎಂಶ್ರೀ ಪ್ರತಿಷ್ಠಾನ, ಸ್ಥಳ- ಎಂವಿಸೀ ಸಭಾಂಗಣ, ಬಿಎಂಶ್ರೀ ಕಲಾಭವನ, ಎನ್.ಆರ್.ಕಾಲೊನಿ, ಬೆಳಿಗ್ಗೆ 11


ನಗರದಲ್ಲಿಂದು ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಅಗಲಿದ ಕನ್ನಡದ ಹಿರಿಯ ಚೇತನದ ಸಂಸ್ಮರಣೆ ಕಾರ್ಯಕ್ರಮದಲ್ಲಿ ಸಾಹಿತಿ ಡಾ.ಪಿ.ವಿ.ನಾರಾಯಣ, ಡಾ.ವಿಜಯಾ, ಸುಬ್ಬರಾಜ್, ಡಾ.ಬೈರಮಂಗಲ ರಾಮೇಗೌಡ, ಡಾ.ಪದ್ಮಿನಿ ನಾಗರಾಜ್, ಎಚ್.ಎಂ. ಕೃಷ್ಣಯ್ಯ ಮತ್ತಿತರರು ಹಾಜರಿದ್ದರು.



## ಪುಸ್ತಕ ಪ್ರಶಸ್ತಿಗೆ ಅರ್ಜಿ ಆಹ್ವಾನ

ಪ್ರಜಾವಾಣಿ ವಾರ್ತೆ 3/7

ಬೆಂಗಳೂರು: ಬಿಎಂಶ್ರೀ ಪ್ರತಿಷ್ಠಾನದ ವತಿಯಿಂದ ನೀಡಲಾಗುವ 'ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ' ಹಾಗೂ 'ಶಾ.ಬಾಲೂರಾವ್ ಅನುವಾದ ಪ್ರಶಸ್ತಿ'ಗೆ ಲೇಖಕರಿಂದ ಪುಸ್ತಕಗಳನ್ನು ಆಹ್ವಾನಿಸಲಾಗಿದೆ.

ಪ್ರಶಸ್ತಿಗಳು ತಲಾ ₹25 ಸಾವಿರ ನಗದು ಹಾಗೂ ಸ್ಮರಣಿಕೆ ಒಳಗೊಂಡಿವೆ.

ಯುವ ಬರಹಗಾರ ಪ್ರಶಸ್ತಿಗೆ 35 ವರ್ಷದೊಳಗಿನವರು ರಚಿಸಿರುವ ಸಾಹಿತ್ಯದ ಯಾವುದೇ ಪ್ರಕಾರದ ಪುಸ್ತಕಗಳು ಹಾಗೂ ಅನುವಾದ ಪ್ರಶಸ್ತಿಗೆ ಬೇರೆ ಭಾಷೆಗಳಿಂದ ಕನ್ನಡಕ್ಕೆ ಅನುವಾದಗೊಂಡಿರುವ ಪುಸ್ತಕಗಳನ್ನು ಸಲ್ಲಿಸಬಹುದು.

## ಬೆಂಗಳೂರು ನಗರ 3B


ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ನಗರದಲ್ಲಿ ಹಮ್ಮಿಕೊಂಡಿದ್ದ ನುಡಿನಮನ ಕಾರ್ಯಕ್ರಮದಲ್ಲಿ ಪಿ.ವಿ. ನಾರಾಯಣ, ಪ್ರತಿಷ್ಠಾನದ ಗೌರವಾಧ್ಯಕ್ಷ ಪ್ರೊ.ಎಂ.ಎಚ್. ಕೃಷ್ಣಯ್ಯ, ಆರ್. ಲಕ್ಷ್ಮೀನಾರಾಯಣ, ಬೈರಮಂಗಲ ರಾಮೇಗೌಡ, ಎಚ್.ಎಸ್. ಎಂ. ಪ್ರಕಾಶ್ ಮತ್ತಿತರರು ಪ್ರೊ.ಜಿ. ವೆಂಕಟಸುಬ್ಬಯ್ಯ, ಎಚ್.ಎಸ್. ದೊರೆಸ್ವಾಮಿ, ಸಿದ್ಧಲಿಂಗಯ್ಯ, ಜರಗನಹಳ್ಳಿ ಶಿವಶಂಕರ್, ಪ್ರೊ.ಬಿ.ಎಸ್. ಸಣ್ಣಯ್ಯ ಹಾಗೂ ಕೋ.ವೆಂ. ರಾಮಕೃಷ್ಣೇಗೌಡ ಅವರ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಿದರು – ಪ್ರಜಾವಾಣಿ ಚಿತ್ರ

### ಅಗಲಿದ ಚೇತನಗಳಿಗೆ ಬಿ.ಎಂ.ಶ್ರೀ. ಪ್ರತಿಷ್ಠಾನ ನುಡಿನಮನ

ಪ್ರಜಾವಾಣಿ ವಾರ್ತೆ

ಬೆಂಗಳೂರು: ಇತ್ತೀಚೆಗೆ ನಿಧನರಾದ ನಿಘಂಟು ತಜ್ಞ ಪ್ರೊ.ಜಿ. ವೆಂಕಟಸುಬ್ಬಯ್ಯ, ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ, ಕವಿ ಸಿದ್ಧಲಿಂಗಯ್ಯ, ಜರಗನಹಳ್ಳಿ ಶಿವಶಂಕರ್, ಸಂಶೋಧಕ ಪ್ರೊ.ಬಿ.ಎಸ್. ಸಣ್ಣಯ್ಯ ಹಾಗೂ ಲೇಖಕ ಕೋ.ವೆಂ. ರಾಮಕೃಷ್ಣೇಗೌಡ ಅವರ ಜೀವನದ ಹಾದಿ, ಸಾಮಾಜಿಕ ಹೋರಾಟ, ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರಕ್ಕೆ ನೀಡಿದ ಕೊಡುಗೆಗಳನ್ನು ಮೆಲುಕು ಹಾಕಲಾಯಿತು.

ಇದಕ್ಕೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ವೇದಿಕೆ ಕಲ್ಪಿಸಿತ್ತು. ನಗರದಲ್ಲಿ ಪ್ರತಿಷ್ಠಾನ ಮಂಗಳವಾರ ಏರ್ಪಡಿಸಿದ ಕಾರ್ಯಕ್ರಮದಲ್ಲಿ ಅಗಲಿದ ಗಣ್ಯರಿಗೆ ಒಡನಾಡಿಗಳು ಹಾಗೂ ಆಪ್ತರು ನುಡಿನಮನ ಸಲ್ಲಿಸಿದರು. ಎಲ್. ಹನುಮಂತಯ್ಯ, ಪಿ.ವಿ. ನಾರಾಯಣ, ವಿಜಯಾ ಸುಬ್ಬರಾಜ್, ನಳಿನಿ ವೆಂಕಟೇಶ್, ಪದ್ಮಿನಿ ನಾಗರಾಜು, ಎಚ್.ಎಸ್.ಎಂ. ಪ್ರಕಾಶ್, ಬೈರಮಂಗಲ ರಾಮೇಗೌಡ, ಪ್ರೊ. ಶಾಂತರಾಜು, ಬಿ.ಆರ್. ರವೀಂದ್ರನಾಥ್ ನೆನಪಿನ ಪುಟಗಳನ್ನು ತಿರುವಿ ಹಾಕಿದರು.

ರಾಜ್ಯಸಭಾ ಸದಸ್ಯ ಎಲ್. ಹನುಮಂತಯ್ಯ, 'ವೆಂಕಟಸುಬ್ಬಯ್ಯ ಅವರು ಅತ್ಯಂತ ಸಂಯಮದಿಂದ ತಮ್ಮ ಕೆಲಸ ಮಾಡುತ್ತಿದ್ದರು. ಕನ್ನಡ ನಿಘಂಟಿಗೆ ದೊಡ್ಡ ಸೇವೆ ಅವರಿಂದ ಸಂದಿದೆ. ದೊರೆಸ್ವಾಮಿ ಅವರು ಎಲ್ಲ ಜನಪರ ಚಳವಳಿಯಲ್ಲಿ ದೊಡ್ಡ ಧ್ವನಿಯಾಗಿ ನಮ್ಮ ಮುಂದೆ ಇದ್ದರು. ಸಿದ್ಧಲಿಂಗಯ್ಯ ಅವರು ಜನರ ನಡುವೆ ಇದ್ದು, ಸಾಹಿತ್ಯ ಸೃಷ್ಟಿಸಿದರು. ಹೀಗಾಗಿ, ಜನಪರ ಕವಿಯಾಗಿ ಗುರುತಿಸಲ್ಪಟ್ಟರು' ಎಂದರು.

'ಹನಿ ಕವಿತೆಯನ್ನು ಜರಗನಹಳ್ಳಿ ಶಿವಶಂಕರ್ ಅವರಷ್ಟು ಪರಿಣಾಮಕಾರಿಯಾಗಿ ಬರೆಯುವವರು ಕಡಿಮೆ. ಆಳವಾದ ವಿಷಯ ಮತ್ತು ಜೀವನ ಪ್ರೀತಿ ಹನಿ ಕವಿತೆಯಲ್ಲಿ ಇರುತ್ತಿತ್ತು. ರಾಮಕೃಷ್ಣೇಗೌಡ ಅವರು ಜೀವ ಪರವಾದ ವ್ಯಕ್ತಿಯಾಗಿದ್ದರು' ಎಂದರು.

ಸಾಹಿತಿ ಪಿ.ವಿ. ನಾರಾಯಣ, 'ವೆಂಕಟಸುಬ್ಬಯ್ಯ ಅವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅವರು ಅಚ್ಚಳಿಯದ ಕೊಡುಗೆ ನೀಡಿದ್ದಾರೆ. ದೊರೆಸ್ವಾಮಿ ಅವರು ಜೀವನದುದ್ದಕ್ಕೂ ಚಳವಳಿಯಲ್ಲಿ ತೊಡಗಿದ್ದರು. ಸಿದ್ಧಲಿಂಗಯ್ಯ ತಮ್ಮ ಸಾಹಿತ್ಯದ ಮೂಲಕ ಹೋರಾಟಕ್ಕೆ ಪ್ರೇರಣೆ ನೀಡಿದರು. ಜರಗನಹಳ್ಳಿ ಶಿವಶಂಕರ್ ಹನಿಗವನಗಳು ತುಂಬಾ ಪರಿಣಾಮಕಾರಿಯಾಗಿದ್ದವು' ಎಂದರು.

ಪ್ರತಿಷ್ಠಾನದ ಅಧ್ಯಕ್ಷ ಆರ್. ಲಕ್ಷ್ಮೀನಾರಾಯಣ, 'ವೆಂಕಟಸುಬ್ಬಯ್ಯ ಅವರು ಪ್ರಾಚೀನ ಸಾಹಿತ್ಯದ ಜತೆಗೆ ಹೊಸಗನ್ನಡ ಸಾಹಿತ್ಯವನ್ನೂ ವಿಶ್ಲೇಷಣೆಗೆ ಒಳಪಡಿಸುತ್ತಿದ್ದರು. ದೊರೆಸ್ವಾಮಿ ಈ ಸಮಾಜದ ಸಾಕ್ಷಿ ಪ್ರಜ್ಞೆಯಂತಿದ್ದರು' ಎಂದು ತಿಳಿಸಿದರು.

## ನಗರದಲ್ಲಿ ಇಂದು 8/7/21

ದತ್ತಿ ಉಪನ್ಯಾಸ: ಎಸ್.ಕೆ. ಪ್ರೇಮಾ, ಪ್ರೊ.ಜಿ.ಎಸ್. ಸಿದ್ಧಲಿಂಗಯ್ಯ ದತ್ತಿ ಕಾರ್ಯಕ್ರಮ: ವಿಷಯ: 'ಕನ್ನಡದ ವಚನಕಾರ್ತಿಯರು ಉಪನ್ಯಾಸ ಮಾಲಿಕೆ', ಉದ್ಘಾಟನೆ: ಪ್ರೊ.ಜಿ.ಎಸ್. ಸಿದ್ಧಲಿಂಗಯ್ಯ, ಉಪಸ್ಥಿತಿ: ಆರ್. ಲಕ್ಷ್ಮೀನಾರಾಯಣ, ಆಯೋಜನೆ: ಬಿ.ಎಂ.ಶ್ರೀ. ಪ್ರತಿಷ್ಠಾನ, ಸಂಜೆ 4.30 (ಆನ್‌ಲೈನ್ ಕಾರ್ಯಕ್ರಮ)

## ನಗರದಲ್ಲಿ ಇಂದು

ದತ್ತಿ ಉಪನ್ಯಾಸ: ರಾಸ ಸಾಹಿತ್ಯ – ಡಿ. ಲಿಂಗಯ್ಯ, ಟಿ.ಎಸ್. ವೆಂಕಣ್ಣಯ್ಯ, ತೀ.ನಂ.ಶ್ರೀ – ಶಾರದಮ್ಮ ಹನುಮಯ್ಯ ದತ್ತಿ ಕಾರ್ಯಕ್ರಮ, ವಿಷಯ: ಜನಪದ ಸಾಹಿತ್ಯಕ್ಕೆ ಪ್ರೊ. ಲಿಂಗಯ್ಯನವರ ಕೊಡುಗೆ, ಉಪನ್ಯಾಸಕರು: ಪ್ರೊ. ಶಾಂತರಾಜು, ಉಪಸ್ಥಿತಿ: ಆರ್. ಲಕ್ಷ್ಮೀನಾರಾಯಣ, ಆಯೋಜನೆ: ಬಿ.ಎಂ. ಶ್ರೀ. ಪ್ರತಿಷ್ಠಾನ, ಸಂಜೆ 4.30 (ಆನ್‌ಲೈನ್ ಕಾರ್ಯಕ್ರಮ)



# ಎಂ.ವಿ.ಸಿ.
# ಬದುಕು ಬರಹ – ೧೭

– ಡಾ. ಪಿ.ವಿ. ನಾರಾಯಣ

ಹಿಂದಿನಸಂಚಿಕೆಯಿಂದ

ಹೆಣ್ಣನ್ನು ಮಿಕ್ಕವುಗಳಂತೆ ವೈದಿಕ ಸಮಾಜವೂ ತುಂಬ ಕ್ರೌರ್ಯದಿಂದ ನಡಸಿಕೊಂಡು ಬಂದಿದೆ. 'ನಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬುದೇ ಅದರ ಧ್ಯೇಯವಾಕ್ಯ. ಅದರಲ್ಲಿಯೂ ಹೆಣ್ಣನ್ನು ಸೂಳೆಯ ಮಟ್ಟಕ್ಕಿಳಿಸಿರುವಲ್ಲಿ ಗಂಡಿನ ಕೊಳಕುತನವೇ ಕಾರಣ. ೧೯೬೬ ರಲ್ಲಿ ಬೆಳಕು ಕಂಡ 'ಆ ಚಿತ್ರಗಳು' ಎಂಬ ಸಂಕಲನದಲ್ಲಿ 'ಬೀದಿ ಸೂಳೆ' ಎಂಬ ನೀಳ್ಗವನವೊಂದೂ ಸೇರಿದೆ. ಬೀದಿ ಸೂಳೆಯ ಕತೆಯನ್ನು ಕೇಳುವುದಕ್ಕೇ ಹೇಸಿಕೊಳ್ಳುವಷ್ಟರ ಮಟ್ಟಿಗಿನದು ಅವಳ ಬಾಳು. ಚಿಕ್ಕ ವಯಸ್ಸಿನಲ್ಲಿ ಹುಡುಗನೊಬ್ಬನ ಜೊತೆ ಭಿಕ್ಷೆ ಬೇಡುತ್ತಿದ್ದ ಹೆಣ್ಣು ಈಗ ಒಂಟಿಯಾಗಿದ್ದಾಳೆ; ಭಿಕ್ಷೆಗೂ ತತ್ವಾರವಾಗಿ ಹಸಿವಿನ ಬಾಧೆ ತಾಳದೆ "ಆಹಾರ ಆದಲೋ ಕಾಮಿಗಳ ಕಾಮಕ್ಕೆ"; ಅಂತಹವಳ ಬಗ್ಗೆ ಕನಿಕರ ತೋರಿಸಿ ಕೈಲಾದ ಸಹಾಯ ನೀಡುವಂತೆ ಕವಿ ಕರೆಗೊಡುತ್ತಾನೆ. ಈ ಪದ್ಯವನ್ನೋದಿದಾಗ ಯಾರಿಗಾದರೂ ನಿರಂಜನರ 'ಕೊನೆಯ ಗಿರಾಕಿ' ಎಂಬ ಅನುಪಮ ಸಣ್ಣ ಕತೆ ನೆನಪಾಗದಿರದು.

ಸ್ವಾರಸ್ಯಕರ ಅಂಶವೆಂದರೆ ಸಾಮಾಜಿಕತೆಯನ್ನು ವಸ್ತುವನ್ನಾಗಿ ಒಳಗೊಂಡ ಇಂತಹ ಕವನಗಳನ್ನು ನಾವು ಹೆಚ್ಚಾಗಿ ಕಾಣುವುದು ಶ್ರೀಯುತರ ಮೊದಲ ಸಂಕಲನದಲ್ಲಿಯೇ; ಬರಬರುತ್ತ ಇಂತಹವು ಕಡಿಮೆಯಾಗಿವೆ. ಪ್ರಗತಿಶೀಲ ಚಳವಳಿಯಲ್ಲಿ ಈ ವಿಷಮತೆಯ ಚಿತ್ರಣವೇ ತುಂಬಿಕೊಂಡದ್ದರಿಂದ, ಆ ಚಳವಳಿಯ ಉಗ್ರ ವಿರೋಧಿಗಳಾದ ಎಂವಿಸೀ ಮುಂದೆ ಆ ವಿಷಯಕ್ಕೆ ಕೈಹಾಕಲಿಲ್ಲವೇನೋ! ಪ್ರಗತಿಶೀಲ ಚಳವಳಿಯ ಕುರಿತು ಎಂವಿಸೀ ಅವರೇ ಹೀಗೆ ಹೇಳಿಕೊಂಡಿದ್ದಾರೆ: "೧೯೪೨–೪೫ರ ಸುಮಾರಿನಲ್ಲಿ, ಭಾರತದ ಎಲ್ಲ ಪ್ರಾಂತಗಳ ಸಾಹಿತ್ಯದಲ್ಲೂ ಪ್ರಗತಿಶೀಲ ಸಾಹಿತ್ಯದ ಚಳವಳಿ ಜೋರಾಗಿ ಪ್ರಾರಂಭವಾಗಿತ್ತು. ಸಾಹಿತ್ಯ ಬಡವರ ಬವಣೆಯನ್ನು ಚಿತ್ರಿಸಬೇಕು, ಆ ಮೂಲಕ ಸರ್ವಸಮಾನತಾ ತತ್ವವನ್ನು ಪ್ರತಿಪಾದಿಸಬೇಕು – ಎಂಬ ನಿಲವಿನಲ್ಲಿ ತಪ್ಪೇನೂ ಇಲ್ಲ. ಪ್ರಗತಿಶೀಲ ಪಂಥದ ಬರಹಗಾರರು ಇಷ್ಟಕ್ಕೆ ನಿಲ್ಲದೆ, ಸಮಕಾಲೀನ ಕವಿಗಳು ನಿಸರ್ಗದ ವರ್ಣನೆ ಮಾಡುತ್ತಿದ್ದುದನ್ನೂ, ಪಾಚೀನ ಸಾಂಸ್ಕೃತಿಕ ಪರಂಪರೆಯಲ್ಲಿ ನಿಷ್ಠೆಯುಳ್ಳವರಾಗಿದ್ದುದನ್ನೂ ಕಟುವಾಗಿ ಟೀಕಿಸಿದರು. ಈ ಕವಿಗಳು ದಂತದ ಗೋಪುರದಲ್ಲಿ ಕುಳಿತು ಬರೆಯುವರು –ಎಂದು ಹಾಸ್ಯ ಮಾಡಿದರು. ಇವರು ಪ್ರಗತಿಶೀಲರ ದೃಷ್ಟಿಯಲ್ಲಿ ಪ್ರತಿಗಾಮಿಗಳಾದರು. ಹರೆಯದ ಬಿಸಿರಕ್ತದ 'ರಾಘವ'ನಿಗೆ ಇದು ಸಹಿಸಲಿಲ್ಲ. ಪ್ರಗತಿಶೀಲ ಸಾಹಿತ್ಯದ ನಿಲವನ್ನು ಪದ್ಯದಲ್ಲಿ ಪ್ರತಿಟಿಸುತ್ತಾ ಆ ಗುಂಪಿನೊಂದಿಗೆ ಬಹುಮಟ್ಟಿಗೆ ಏಕಾಂಗಿಯಾಗಿಯೇ ಹೋರಾಡಿದನು." ಹೀಗೆ ಬರೆದ ಪದ್ಯಗಳೇ 'ಕಾವ್ಯಾಲಾಪ'. ಇವು ಮೊದಲು ಒಂದು ಸಣ್ಣ ಸಂಗ್ರಹವಾಗಿ ೧೯೪೪ ರಲ್ಲಿ ಪ್ರಕಟವಾಗಿತ್ತು. ಆದರೆ ಮುಂದೆಯೂ ತಮ್ಮ ಡೈರಿಯಲ್ಲಿ ಆ ವಿಷಯ ಕುರಿತ ನೂರಾರು ಪದ್ಯಗಳನ್ನು ಎಂವಿಸೀ ರಚಿಸಿದ್ದರು. ಅವುಗಳಿಗೆ ಕ್ರಮಸಂಖ್ಯೆ ಇದ್ದುದರಿಂದ ಮುಂದೆ ಇವನ್ನು ಅವರ ಮರಣಾನಂತರ ಒಟ್ಟಾಗಿ ಪ್ರಕಟಿಸಲಾಯಿತು. ಇದರಲ್ಲಿ ೨೮೩ ಚತುಷ್ಪದಿಗಳಿವೆ. ಇದರಲ್ಲಿ

ತಾನು ನುಡಿದುದೆ ವೇದ, ತಾನು ನಡೆದುದೆ ಮಾರ್ಗ
ತಾನು ಕಂಡುದೆ ಸತ್ಯವೆಂಬ ಹಮ್ಮೇಕೆ?
ತಾನೆ ರಸಿಕರ ರಸಿಕ, ಕಲಿಯುಗದ ಮನ್ಮಥನು
ಎಂದೆಂಬ ಬಡಿವಾರ ಬಿಂಕ ಹಮ್ಮೇಕೆ?
ಮೂಲಕೆಗಳೌಷಧವಕ್ಕುಪಯೋಗವೆಂದವನೆ
ಎಲ್ಲ ತೋಟಗಳಲ್ಲು ಬೆಳೆಯಲಹುದೆ?
ಬಾಳಿಗೇನುಪಯೋಗ ಹೂಗಳಿಂದೆನುತೆಲ್ಲ
ಹೂಗಿಡಗಳನು ಕಿತ್ತು ಬಿಸುಡಬಹುದೆ?
ಪರತತ್ತ್ವವೊಂದುಂಟು ಪಂಚೇಂದ್ರಿಯಂಗಳ್ಗೆ
ಅರಿಯಲರಿದದರಿಂದ ಇಲ್ಲವೆನಬೇಡ;
ಇಂದ್ರಿಯಂಗಳಿಗೊದಗಿ ಬಂದುದೇ ಸತ್ಯವೆನೆ
ಇಂದಿದ್ದು ತೋರಿ ನಾಳೆಗೆ ಇಲ್ಲ, ನೋಡ

ಎಂಬಂತಹ ಪದ್ಯಗಳಿವೆ. ಆ ಕಾಲಕ್ಕೆ ಈ ಪದ್ಯಗಳನ್ನು ಕುರಿತು, "ಕವಿಮಿತ್ರರ ಮಾತು ಅಲ್ಲಲ್ಲಿ ಬಿರುಸಾಗಿದೆ. ಅಲ್ಲಲ್ಲಿ ರಸದ ಕ್ಷುರಧಾರೆಯ ಎಲ್ಲೆಯನ್ನೂ ದಾಟಿದ ಕಾವನ್ನು ತೋರುತ್ತಿದೆ" ಎಂದು ಮಾಸ್ತಿಯವರಂಥವರು ನುಡಿದುದುಂಟು. (ಮುಂದುವರಿಯುವುದು)

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2021-2023
dt. 28-12-2020
Office of Posting: Bangalore PSO, Bangalore 560026
Price : Annual Subscription Rs. 20/-
Date of publishing and Posting : 30-7-2021

**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI SMARAKA PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**

**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ..........................................................................

..........................................................................

..........................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭